(v) ಪರೀಕ್ಷೆಗಳನ್ನು ನಡೆಸುವುದು ಹಾಗೂ ಪರೀಕ್ಷೆ ನಡೆಸುವ ಸಂಸ್ಥೆಗಳು, ಪರೀಕ್ಷಕರು, ಪರೀಕ್ಷಾ ಮೇಲ್ವಿಚಾರಕರು, ಟ್ಯಾಬುಲೇಟರ್‌ಗಳು ಮತ್ತು ಮಾಡರೇಟರ್‌ಗಳ ನೇಮಕಾತಿ ಷರತ್ತುಗಳು ಮತ್ತು ವಿಧಾನ ಹಾಗೂ ಅವರ ಕರ್ತವ್ಯಗಳು;

(vi) ವಿಶ್ವವಿದ್ಯಾಲಯದ ಪರೀಕ್ಷೆಗಳಿಗೆ, ಪದವಿಗಳಿಗೆ ಹಾಗೂ ಇತರ ಶೈಕ್ಷಣಿಕ ಪ್ರಶಸ್ತಿಗಳಿಗೆ ಪ್ರವೇಶಕ್ಕೆ ವಿಧಿಸತಕ್ಕ ಶುಲ್ಕ;

(vii) ವಿಶ್ವವಿದ್ಯಾಲಯ ಅಥವಾ ಒಂದು ಘಟಕ ಕಾಲೇಜಿನಲ್ಲಿ ವಿದ್ಯಾರ್ಥಿಗಳ ನಿವಾಸಕ್ಕಾಗಿ ಷರತ್ತುಗಳು;

(viii) ವಿಶ್ವವಿದ್ಯಾಲಯ ಅಥವಾ ಒಂದು ಘಟಕ ಕಾಲೇಜಿನ ವಿದ್ಯಾರ್ಥಿಗಳಲ್ಲಿ ಶಿಸ್ತು ಪಾಲನೆ;

(ix) ಈ ಅಧಿನಿಯಮದ ಅಡಿಯಲ್ಲಿನ ಪರಿನಿಯಮಗಳಲ್ಲಿ ಉಪಬಂಧ ಕಲ್ಪಿಸಬಹುದಾಂಥ ಇತರ ಎಲ್ಲಾ ವಿಷಯಗಳು.

**36. ವಿನಿಯಮಗಳ ರಚನೆ ವಿಧಾನ.–** ವಿನಿಯಮಗಳನ್ನು ಶೈಕ್ಷಣಿಕ ಪರಿಷತ್ತು ರಚಿಸತಕ್ಕದ್ದು ಹಾಗೂ ವ್ಯವಸ್ಥಾಪನಾ ಮಂಡಳಿಯು ಅನುಮೋದಿಸತಕ್ಕದ್ದು.

**37. ವಿನಿಯಮಗಳ ತಿದ್ದುಪಡಿಗೆ ಅಧಿಕಾರ.–** ವ್ಯವಸ್ಥಾಪನಾ ಮಂಡಳಿಯ ಅನುಮೋದನೆಯೊಡನೆ ಶೈಕ್ಷಣಿಕ ಪರಿಷತ್ತು ಹೊಸ ವಿನಿಯಮಗಳನ್ನು ಅಥವಾ ಹೆಚ್ಚುವರಿ ವಿನಿಯಮಗಳನ್ನು ರಚಿಸಬಹುದು ಅಥವಾ ವಿನಿಯಮಗಳ ತಿದ್ದುಪಡಿ ಮಾಡಬಹುದು ಅಥವಾ ನಿರಸನಗೊಳಿಸಬಹುದು.

**38. ಶುಲ್ಕ ನಿಯಂತ್ರಣ ಸಮಿತಿ.–** (1) ಸರ್ಕಾರವು ರಚಿಸಿದ ನಿವೃತ್ತ ಸರ್ವೋಚ್ಚ ನ್ಯಾಯಾಲಯದ ಅಥವಾ ಉಚ್ಚ ನ್ಯಾಯಾಲಯದ ನ್ಯಾಯಾಧೀಶರು ಮುಖ್ಯಸ್ಥರಾಗಿರುವ ಮತ್ತು ವಿಶ್ವವಿದ್ಯಾಲಯದ ಕುಲಾಧಿಪತಿ, ಕುಲಪತಿ, ಉನ್ನತ ಶಿಕ್ಷಣ ಪ್ರಭಾರದಲ್ಲಿರುವ ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ ಅಥವಾ ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆಯಲ್ಲದ ಅವರ ನಾಮನಿರ್ದೇಶಿತರು, ವೈದ್ಯಕೀಯ ಶಿಕ್ಷಣದ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ ಅಥವಾ ಉಪಕಾರ್ಯದರ್ಶಿ ದರ್ಜೆಗಿಂತ ಕಡಿಮೆಯಲ್ಲದ ಅವರ ನಾಮನಿರ್ದೇಶಿತರು, ಒಬ್ಬ ಮಹಿಳೆಯೂ ಸೇರಿದಂತೆ ಪ್ರಬಂಧಕ ಮಂಡಳಿಯು ನಾಮನಿರ್ದೇಶಿಸಿದ ಇಬ್ಬರು ಶಿಕ್ಷಣ ತಜ್ಞರು ಇವರುಗಳನ್ನು ಒಳಗೊಂಡ ಒಂದು ಶುಲ್ಕ ನಿಯಂತ್ರಣ ಸಮಿತಿಯು, 9ನೇ ಪ್ರಕರಣದ ಅಡಿಯಲ್ಲಿ ಕರ್ನಾಟಕದ ವಿದ್ಯಾರ್ಥಿಗಳಿಗಾಗಿ ಮೀಸಲಿರಿಸಿದ ವಿಶ್ವವಿದ್ಯಾಲಯದ ಸ್ಥಾನಗಳ ಶುಲ್ಕವನ್ನು ನಿಯಂತ್ರಿಸತಕ್ಕದ್ದು. ಸಮಿತಿಯಲ್ಲಿ ಈ ಉದ್ದೇಶಕ್ಕಾಗಿ ಒಬ್ಬರು ಖ್ಯಾತ ಚಾರ್ಟರ್ಡ್ ಅಕೌಂಟೆಂಟ್ ರವರನ್ನು ಸಹ ಸದಸ್ಯನನ್ನಾಗಿ ಸೇರಿಸಿಕೊಳ್ಳತಕ್ಕದ್ದು.

(2) ಸಮಿತಿಯು ವಿಶ್ವವಿದ್ಯಾಲಯದ ಪ್ರವೇಶಗಳ ಮತ್ತು ಶುಲ್ಕದ ಸಂಗ್ರಹಣೆಯ ಅನುಪಾಲನೆಯನ್ನು ನೋಡಿಕೊಳ್ಳತಕ್ಕದ್ದು.

## ಅಧ್ಯಾಯ - VI

## ಸಂಕೀರ್ಣ

**39. ನೌಕರರ ಸೇವಾ ಷರತ್ತುಗಳು.–** (1) ಪರಿನಿಯಮಗಳ ಮತ್ತು ವಿನಿಯಮಗಳ ಮೂಲಕ ನಿರ್ದಿಷ್ಟಪಡಿಸಬಹುದಾದ ಅಥವಾ ನಿಯಮಗಳ ಮೂಲಕ ನಿಯಮಿಸಬಹುದಾದ ಅಂಥ ನಿಬಂಧನೆಗಳು ಮತ್ತು ಷರತ್ತುಗಳು, ಯಾವುದಾದರೂ ಇದ್ದಲ್ಲಿ, ಅವುಗಳಿಗೆ ಒಳಪಟ್ಟು ಪ್ರತಿಯೊಬ್ಬ ನೌಕರನು ಲಿಖಿತ ಕರಾರಿನ ಅಡಿಯಲ್ಲಿ ನೇಮಕಗೊಳ್ಳತಕ್ಕದ್ದು ಮತ್ತು ಅದನ್ನು ವಿಶ್ವವಿದ್ಯಾಲಯದಲ್ಲಿ ಇಟ್ಟುಕೊಳ್ಳತಕ್ಕದ್ದು ಹಾಗೂ ಅದರ ಪ್ರತಿಯನ್ನು ಸಂಬಂಧಪಟ್ಟ ನೌಕರನಿಗೆ ನೀಡತಕ್ಕದ್ದು.

(2) ನೌಕರರ ವಿರುದ್ಧ ಶಿಸ್ತು ಕ್ರಮವನ್ನು ಪರಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದ ಕಾರ್ಯವಿಧಾನಗಳ ಮೂಲಕ ನಿಯಂತ್ರಿಸತಕ್ಕದ್ದು.

(3) ಕರಾರಿನಿಂದಾಗಿ ವಿಶ್ವವಿದ್ಯಾಲಯ ಮತ್ತು ನೌಕರನ ಮಧ್ಯದಲ್ಲಿ ಉದ್ಭವಿಸಬಹುದಾದ ಯಾವುದೇ ವಿವಾದವನ್ನು, ಲಿಖಿತ ಕರಾರಿನಲ್ಲಿ ಉಪಬಂಧಿಸಿದ ವಿಧಾನದಲ್ಲಿ ಹಾಗೂ ಪರಿನಿಯಮಗಳ ಅನುಸಾರವಾಗಿ ಪರಿಹರಿಸತಕ್ಕದ್ದು.

**40. ಮೇಲ್ಮನವಿ ಹಕ್ಕು.–** ವಿಶ್ವವಿದ್ಯಾಲಯವು ತನ್ನ ನೌಕರರ ಅಥವಾ ವಿದ್ಯಾರ್ಥಿಗಳ ವಿರುದ್ಧ ಶಿಸ್ತು ಕ್ರಮ ಕೈಗೊಂಡ ಸಂದರ್ಭದಲ್ಲಿ, ಬಾಧಿತ ನೌಕರ ಅಥವಾ ವಿದ್ಯಾರ್ಥಿಗಳು ಪರಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದಂತೆ ಮೇಲ್ಮನವಿ ಹಕ್ಕನ್ನು ಹೊಂದಿರತಕ್ಕದ್ದು.

**41. ಭವಿಷ್ಯ ಅಥವಾ ನಿವೃತ್ತಿ ವೇತನ ನಿಧಿ .–** ವಿಶ್ವವಿದ್ಯಾಲಯವು, ತನ್ನ ನೌಕರರ ಪ್ರಯೋಜನಕ್ಕಾಗಿ, ಪರಿನಿಯಮಗಳು ಮತ್ತು ಜಾರಿಯಲ್ಲಿರುವ ಕಾನೂನುಗಳ ಮೂಲಕ ನಿರ್ದಿಷ್ಟಪಡಿಸಬಹುದಾದ ಅಂಥ ವಿಧಾನದಲ್ಲಿ ಮತ್ತು ಅಂಥ ಷರತ್ತುಗಳಿಗೆ ಒಳಪಟ್ಟು ತಾನು ಸೂಕ್ತವೆಂದು ಭಾವಿಸಬಹುದಾದ ಅಂಥ ಭವಿಷ್ಯ ಅಥವಾ ನಿವೃತ್ತಿ ವೇತನ ನಿಧಿಯನ್ನು ರಚಿಸತಕ್ಕದ್ದು ಹಾಗೂ ಅಂಥ ವಿಮಾ ಯೋಜನೆಗಳನ್ನು ಒದಗಿಸತಕ್ಕದ್ದು.

**42. ವಿಶ್ವವಿದ್ಯಾಲಯದ ಪ್ರಾಧಿಕಾರಗಳು ಮತ್ತು ಸಂಸ್ಥೆಗಳ ರಚನೆಯ ವಿವಾದಗಳು.–** ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ಇತರ ಸಂಸ್ಥೆಯ ಸದಸ್ಯನಾಗಿ ಯಾವೊಬ್ಬ ವ್ಯಕ್ತಿಯು ಸೂಕ್ತವಾಗಿ ಆಯ್ಕೆಯಾಗಿದ್ದಾನೆಯೇ ಅಥವಾ ನೇಮಕಗೊಂಡಿದ್ದಾನೆಯೇ ಅಥವಾ ಅದಕ್ಕೆ ಅರ್ಹನಾಗಿದ್ದಾನೆಯೇ ಎಂಬ ಯಾವುದೇ ಪ್ರಶ್ನೆ ಉದ್ಭವಿಸಿದರೆ, ಆ ವಿಷಯವನ್ನು ತೀರ್ಮಾನಕ್ಕಾಗಿ ಕುಲಾಧಿಪತಿಯವರಿಗೆ ಕಳುಹಿಸತಕ್ಕದ್ದು ಮತ್ತು ಅವರ ತೀರ್ಮಾನವು ಅಂತಿಮವಾಗಿರತಕ್ಕದ್ದು.

**43. ಸಮಿತಿಗಳ ರಚನೆ.–** 22ನೇ ಪ್ರಕರಣದಲ್ಲಿ ನಮೂದಿಸಿದ ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರವು ತಾನು ಸೂಕ್ತವೆಂದು ಭಾವಿಸಬಹುದಾದ ಅಂಥ ಅಧಿಕಾರವನ್ನು ಹೊಂದಿರುವ ಅಂಥ ಸದಸ್ಯರನ್ನು ಒಳಗೊಂಡ ಅಂಥ ಪ್ರಾಧಿಕಾರದ ಒಂದು ಸಮಿತಿಯನ್ನು ರಚಿಸಲು ಅಧಿಕಾರವನ್ನು ಹೊಂದಿರತಕ್ಕದ್ದು.

**44. ಆಕಸ್ಮಿಕವಾಗಿ ಖಾಲಿಯಾದ ಸ್ಥಾನಗಳನ್ನು ತುಂಬುವುದು.–** ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ಸಂಸ್ಥೆಯ ಪದನಿಮಿತ್ತ ಸದಸ್ಯರನ್ನು ಹೊರತುಪಡಿಸಿ, ಸದಸ್ಯರ ಪೈಕಿ ಯಾವುದೇ ಸ್ಥಾನವು ಆಕಸ್ಮಿಕವಾಗಿ ಖಾಲಿಯಾದರೆ, ಯಾರ ಸ್ಥಾನವು ಖಾಲಿಯಾಗಿ ತುಂಬಬೇಕಾಗಿ ಬಂದಿದೆಯೋ ಆ ಸದಸ್ಯನನ್ನು ಯಾವ ರೀತಿಯಲ್ಲಿ ಆರಿಸಲಾಗಿತ್ತೋ ಅದೇ ರೀತಿಯಲ್ಲಿ ಹೊಸ ಸದಸ್ಯನನ್ನು ಆರಿಸಿ ಭರ್ತಿ ಮಾಡತಕ್ಕದ್ದು ಮತ್ತು ಹಾಗೆ ಖಾಲಿ ಸ್ಥಾನವನ್ನು ಭರ್ತಿ ಮಾಡಿದ ವ್ಯಕ್ತಿಯು ಆತನು ಯಾವ ಸದಸ್ಯನ ಸ್ಥಾನದಲ್ಲಿ ಭರ್ತಿಯಾಗಿರುವನೋ ಆ ಸದಸ್ಯನು ಪ್ರಾಧಿಕಾರ ಅಥವಾ ಸಂಸ್ಥೆಯ ಸದಸ್ಯನಾಗಿ ಉಳಿಯುತ್ತಿದ್ದ ಬಾಕಿ ಅವಧಿಯವರೆಗೆ ಮಾತ್ರ ಸದಸ್ಯನಾಗಿರತಕ್ಕದ್ದು.

**45. ಸದ್ಭಾವನೆಯಿಂದ ಕೈಗೊಂಡ ಕ್ರಮದ ರಕ್ಷಣೆ.–** ಈ ಅಧಿನಿಯಮ ಅಥವಾ ಪರಿನಿಯಮಗಳು ಅಥವಾ ನಿಯಮಗಳಿಗೆ ಅನುಸಾರವಾಗಿ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಲು ಉದ್ದೇಶಿಸಿದ ಯಾವುದೇ ಕಾರ್ಯಕ್ಕಾಗಿ ವಿಶ್ವವಿದ್ಯಾಲಯದ ಯಾವೊಬ್ಬ ಅಧಿಕಾರಿ ಅಥವಾ ಇತರ ನೌಕರರ ವಿರುದ್ಧ ಯಾವುದೇ ದಾವೆ ಅಥವಾ ಇತರ ಕಾನೂನು ವ್ಯವಹರಣೆಗಳನ್ನು ನಡೆಸಲು ಅವಕಾಶ ಇರತಕ್ಕದ್ದಲ್ಲ.

**46. ತಾತ್ಕಾಲಿಕ ಉಪಬಂಧಗಳು.–** ಈ ಅಧಿನಿಯಮ ಮತ್ತು ಪರಿನಿಯಮಗಳ ಯಾವುದೇ ಇತರ ಉಪಬಂಧಗಳಲ್ಲಿ ಏನೇ ಇದ್ದರೂ,–

(i) ಮೊದಲ ಕುಲಪತಿ ಮತ್ತು ಸಹಕುಲಪತಿ, ಯಾರಾದರೂ ಇದ್ದರೆ, ಅವರನ್ನು ಕುಲಾಧಿಪತಿಯವರು ನೇಮಕಮಾಡತಕ್ಕದ್ದು;

(ii) ಮೊದಲ ಕುಲಸಚಿವರನ್ನು ಮತ್ತು ಮೊದಲ ಹಣಕಾಸು ಅಧಿಕಾರಿಯವರನ್ನು ಕುಲಾಧಿಪತಿಯವರು ನೇಮಕಮಾಡತಕ್ಕದ್ದು; ಮತ್ತು

(iii) ಮೊದಲ ವ್ಯವಸ್ಥಾಪನ ಮಂಡಳಿ, ಮೊದಲ ಹಣಕಾಸು ಸಮಿತಿ, ಮೊದಲ ಸಂಶೋಧನೆ ಮತ್ತು ಅನ್ವೇಷಣಾ ಪರಿಷತ್ತು ಹಾಗೂ ಮೊದಲ ಶೈಕ್ಷಣಿಕ ಪರಿಷತ್ತನ್ನು ಕುಲಾಧಿಪತಿಯವರು ರಚಿಸತಕ್ಕದ್ದು.

**47. ಶಾಶ್ವತ ಶಾಸನಬದ್ಧ ದತ್ತಿ ನಿಧಿ.–** ((1) ವಿಶ್ವವಿದ್ಯಾಲಯವು, ಕನಿಷ್ಠ ಇಪ್ಪತ್ತೈದು ಕೋಟಿ ರೂಪಾಯಿಗಳನ್ನುಳ್ಳ ಒಂದು ಶಾಶ್ವತ ಶಾಸನಬದ್ಧ ದತ್ತಿ ನಿಧಿಯನ್ನು ಸ್ಥಾಪಿಸತಕ್ಕದ್ದು ಇದರ ಪೈಕಿ ಕನಿಷ್ಠ ಹದಿನೈದು ಕೋಟಿ ರೂಪಾಯಿಗಳು ನಗದು ರೂಪದಲ್ಲಿ ಮತ್ತು ಇನ್ನುಳಿದದ್ದು ಬ್ಯಾಂಕ್ ಗ್ಯಾರಂಟಿ ರೂಪದಲ್ಲಿ ಇರತಕ್ಕದ್ದು ಮತ್ತು ಇದನ್ನು ತಾನಾಗಿಯೆ ಹೆಚ್ಚಿಸಬಹುದಾಗಿದ್ದು ಆದರೆ ಕಡಿಮೆ ಮಾಡತಕ್ಕದ್ದಲ್ಲ.

ಪರಂತು, ಬೆಂಗಳೂರು ಅಥವಾ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹೊರಗಿರುವ ವಿಶ್ವವಿದ್ಯಾಲಯದ ಸಂದರ್ಭದಲ್ಲಿ ಕನಿಷ್ಠ ಹತ್ತು ಕೋಟಿ ರೂಪಾಯಿಗಳು ನಗದು ರೂಪದಲ್ಲಿರತಕ್ಕದ್ದು ಮತ್ತು ಉಳಿದ ಐದು ಕೋಟಿ ರೂಪಾಯಿಗಳು ಬ್ಯಾಂಕ್ ಗ್ಯಾರಂಟಿಯ ರೂಪದಲ್ಲಿರತಕ್ಕದ್ದು.

(2) ವಿಶ್ವವಿದ್ಯಾಲಯವು, ನಿಯಮಿಸಬಹುದಾದ ಅಂಥ ವಿಧಾನದಲ್ಲಿ ಶಾಶ್ವತ ಶಾಸನಬದ್ಧ ದತ್ತಿ ನಿಧಿಯ ಹಣವನ್ನು ಹೂಡಲು ಅಧಿಕಾರವನ್ನು ಹೊಂದಿರತಕ್ಕದ್ದು.

(3) ವಿಶ್ವವಿದ್ಯಾಲಯವು ಸಾಮಾನ್ಯ ನಿಧಿ ಅಥವಾ ಅಭಿವೃದ್ಧಿ ನಿಧಿಯಿಂದ ಯಾವುದೇ ಮೊಬಲಗನ್ನು ಶಾಶ್ವತ ಶಾಸನಬದ್ಧ ದತ್ತಿ ನಿಧಿಗೆ ವರ್ಗಾವಣೆ ಮಾಡಬಹುದು. ವಿಶ್ವವಿದ್ಯಾಲಯವನ್ನು ಸಮಾಪನಗೊಳಿಸುವ ಸಂದರ್ಭವನ್ನು ಹೊರತುಪಡಿಸಿ, ಇತರ ಯಾವ ಸಂದರ್ಭಗಳಲ್ಲೂ ಶಾಶ್ವತ ಶಾಸನಬದ್ಧ ದತ್ತಿ ನಿಧಿಯಿಂದ ಯಾವುದೇ ಮೊಬಲಗನ್ನೂ ಇತರ ಉದ್ದೇಶಗಳಿಗಾಗಿ ವರ್ಗಾಯಿಸತಕ್ಕದ್ದಲ್ಲ.

(4) ಶಾಶ್ವತ ಶಾಸನಬದ್ಧ ದತ್ತಿ ನಿಧಿಯಿಂದ ಸ್ವೀಕರಿಸಿದ ವರಮಾನದ ಶೇಕಡಾ ಎಪ್ಪತ್ತೈದರಷ್ಟನ್ನು ವಿಶ್ವವಿದ್ಯಾಲಯದ ಅಭಿವೃದ್ಧಿ ಅಥವಾ ಸಾಮಾನ್ಯ ಕೆಲಸಗಳ ಉದ್ದೇಶಗಳಿಗಾಗಿ ಬಳಸಿಕೊಳ್ಳತಕ್ಕದ್ದು. ಉಳಿದ ಶೇಕಡಾ ಇಪ್ಪತ್ತೈದರಷ್ಟನ್ನು ಶಾಶ್ವತ ಶಾಸನಬದ್ಧ ದತ್ತಿ ನಿಧಿಯಲ್ಲಿ ಪುನ: ತೊಡಗಿಸತಕ್ಕದ್ದು.

**48. ವಿಶ್ವವಿದ್ಯಾಲಯದ ದತ್ತಿ ನಿಧಿ.–** (1) ವಿಶ್ವವಿದ್ಯಾಲಯವು, ಪ್ರಾಯೋಜಕ ಸಂಸ್ಥೆಯು ನಿರ್ಧರಿಸಬಹುದಾದಂತೆ ನಿಧಿಗಳನ್ನು ಒಳಗೊಂಡ ವಿಶ್ವವಿದ್ಯಾಲಯದ ದತ್ತಿ ನಿಧಿಯನ್ನು ಸ್ಥಾಪಿಸತಕ್ಕದ್ದು. ಇದು ಕಾಲಕಾಲಕ್ಕೆ ಸ್ವೀಕರಿಸಬಹುದಾದ ದೇಣಿಗೆಗಳು ಮತ್ತು ಇತರ ನಿಧಿಗಳನ್ನು ಒಳಗೊಂಡಿರತಕ್ಕದ್ದು.

(2) ವಿಶ್ವವಿದ್ಯಾಲಯವು, ಪರಿನಿಯಮಗಳ ಮೂಲಕ ನಿರ್ದಿಷ್ಟಪಡಿಸಬಹುದಾದ ವಿಧಾನದಲ್ಲಿ ವಿಶ್ವವಿದ್ಯಾಲಯದ ದತ್ತಿನಿಧಿಯನ್ನು ಹೂಡುವ ಅಧಿಕಾರವನ್ನು ಹೊಂದಿರತಕ್ಕದ್ದು.

(3) ವಿಶ್ವವಿದ್ಯಾಲಯ ದತ್ತಿ ನಿಧಿಯು, ವಿಶ್ವವಿದ್ಯಾಲಯವು ತನ್ನ ಸಾಮಾಜಿಕ ಧ್ಯೇಯೋದ್ದೇಶಗಳನ್ನು ನೆರವೇರಿಸುವ ಸಂದರ್ಭದಲ್ಲಿ ಮತ್ತು/ಅಥವಾ ಮುಂಗಾಣದ ಸನ್ನಿವೇಶದಲ್ಲಿ ಉದ್ಭವಿಸಬಹುದಾದ ಹಣಕಾಸು ಸವಾಲುಗಳಿಂದ ತನ್ನನ್ನು ರಕ್ಷಿಸಿಕೊಳ್ಳುವುದಕ್ಕಾಗಿ, ಸ್ವಇಚ್ಛೆಯಿಂದ ನಿರ್ವಹಿಸಿಕೊಂಡು ಬರಲು ಮತ್ತು ಜವಾಬ್ದಾರಿಯಿಂದ ಹಣ ಹೂಡಿಕೆ ಮಾಡಲು ಇಚ್ಛೆಯುಳ್ಳವರಾಗಿ ಸ್ವಯಂ ವಿಧಿಸಿಕೊಂಡ ನಿಧಿಯಾಗಿರತಕ್ಕದ್ದು.

(4) ವಿಶ್ವವಿದ್ಯಾಲಯವು, ಸಾಮಾನ್ಯ ನಿಧಿ ಅಥವಾ ಅಭಿವೃದ್ಧಿ ನಿಧಿಯಿಂದ ಯಾವುದೇ ಮೊಬಲಗನ್ನು ವಿಶ್ವವಿದ್ಯಾಲಯದ ದತ್ತಿ ನಿಧಿಗೆ ವರ್ಗಾಯಿಸಬಹುದು. ವಿಶ್ವವಿದ್ಯಾಲಯದ ಸಮಾಪಣೆಗೊಳಿಸುವ ಸಂದರ್ಭವನ್ನು ಹೊರತುಪಡಿಸಿ, ಇತರ ಯಾವ ಸಂದರ್ಭಗಳಲ್ಲೂ ವಿಶ್ವವಿದ್ಯಾಲಯದ ದತ್ತಿ ನಿಧಿಯಿಂದ ಯಾವುದೇ ಮೊಬಲಗನ್ನು ಇತರ ಉದ್ದೇಶಗಳಿಗಾಗಿ ವರ್ಗಾಯಿಸತಕ್ಕದ್ದಲ್ಲ.

(5) ವಿಶ್ವವಿದ್ಯಾಲಯದ ದತ್ತಿ ನಿಧಿಯಿಂದ ಬರುವ ವರಮಾನದ ಶೇಕಡಾ ಎಂಭತ್ತರಷ್ಟನ್ನು ವಿಶ್ವವಿದ್ಯಾಲಯದ ಅಭಿವೃದ್ಧಿ ಅಥವಾ ಸಾಮಾನ್ಯ ಕೆಲಸದ ಉದ್ದೇಶಗಳಿಗಾಗಿ ಬಳಸಿಕೊಳ್ಳತಕ್ಕದ್ದು. ಉಳಿದ ಶೇಕಡಾ ಇಪ್ಪತ್ತರಷ್ಟನ್ನು ವಿಶ್ವವಿದ್ಯಾಲಯದ ದತ್ತಿ ನಿಧಿಯಲ್ಲಿ ಪುನಃ ತೊಡಗಿಸತಕ್ಕದ್ದು.

**49. ಸಾಮಾನ್ಯ ನಿಧಿ.–** (1) ವಿಶ್ವವಿದ್ಯಾಲಯವು, ಒಂದು ಸಾಮಾನ್ಯ ನಿಧಿಯನ್ನು ಸ್ಥಾಪಿಸತಕ್ಕದ್ದು. ಇದರಲ್ಲಿ ಈ ಮುಂದಿನ ಮೊಬಲಗುಗಳನ್ನು ಜಮಾ ಮಾಡತಕ್ಕದ್ದು, ಎಂದರೆ:–

(i) ವಿಶ್ವವಿದ್ಯಾಲಯವು ವಿಧಿಸಬಹುದಾದ ಎಲ್ಲಾ ಶುಲ್ಕಗಳು;

(ii) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೂಲಕ ನಿಷೇಧಿಸದೇ ಇರುವ ಯಾವುದೇ ಇತರ ಮೂಲದಿಂದ ಸ್ವೀಕರಿಸಲಾದ ಎಲ್ಲಾ ಮೊತ್ತ;

(iii) ವಿಶ್ವವಿದ್ಯಾಲಯಕ್ಕೆ ಮಾಡಿದ ಎಲ್ಲಾ ದೇಣಿಗೆಗಳು;

(iv) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೂಲಕ ನಿಷೇಧಿಸದೇ ಇರುವ ಯಾವೊಬ್ಬ ಇತರ ವ್ಯಕ್ತಿ ಅಥವಾ ಸಂಸ್ಥೆಯು ಈ ಸಂಬಂಧದಲ್ಲಿ ಕೊಟ್ಟ ಎಲ್ಲಾ ದೇಣಿಗೆಗಳು/ವಂತಿಗೆಗಳು;

(2) ಸಾಮಾನ್ಯ ನಿಧಿಗೆ ಜಮಾ ಮಾಡುವ ನಿಧಿಗಳನ್ನು ವಿಶ್ವವಿದ್ಯಾಲಯದ ಎಲ್ಲಾ ಆವರ್ತಕ ವೆಚ್ಚಗಳನ್ನು ಭರಿಸಲು ಉಪಯೋಗಿಸಕೊಳ್ಳತಕ್ಕದ್ದು.

**50. ಅಭಿವೃದ್ಧಿ ನಿಧಿ.–** (1) ವಿಶ್ವವಿದ್ಯಾಲಯವು, ಒಂದು ಅಭಿವೃದ್ಧಿ ನಿಧಿಯನ್ನು ಸಹ ಸ್ಥಾಪಿಸತಕ್ಕದ್ದು. ಇದರಲ್ಲಿ ಈ ಮುಂದಿನ ಮೊಬಲಗುಗಳನ್ನು ಜಮಾ ಮಾಡತಕ್ಕದ್ದು, ಎಂದರೆ:–

(i) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೂಲಕ ನಿಷೇಧಿಸದೇ ಇರುವ ವಿದ್ಯಾರ್ಥಿಗಳಿಂದ ವಿಧಿಸಬಹುದಾದ ಅಭಿವೃದ್ಧಿ ಶುಲ್ಕಗಳು;

(ii) ವಿಶ್ವವಿದ್ಯಾಲಯದ ಅಭಿವೃದ್ಧಿಯ ಉದ್ದೇಶಗಳಿಗಾಗಿ ಯಾವುದೇ ಇತರ ಮೂಲಗಳಿಂದ ಸ್ವೀಕರಿಸಿದ ಎಲ್ಲಾ ಮೊತ್ತ;

(iii) ವಿಶ್ವವಿದ್ಯಾಲಯಕ್ಕೆ ಮಾಡಿದ ಎಲ್ಲಾ ವಂತಿಗೆಗಳು;

(iv) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೂಲಕ ನಿಷೇಧಿಸದೇ ಇರುವ ಯಾವೊಬ್ಬ ಇತರ ವ್ಯಕ್ತಿ ಅಥವಾ ಸಂಸ್ಥೆಯು ಈ ಸಂಬಂಧದಲ್ಲಿ ಕೊಟ್ಟ ಎಲ್ಲಾ ದೇಣಿಗೆಗಳು/ವಂತಿಗೆಗಳು; ಮತ್ತು

(v) ಶಾಶ್ವತ ಶಾಸನಬದ್ಧ ದತ್ತಿ ನಿಧಿಯಿಂದ ಸ್ವೀಕರಿಸಲಾದ ಎಲ್ಲಾ ವರಮಾನಗಳು.

(2) ಅಭಿವೃದ್ಧಿ ನಿಧಿಗೆ ಕಾಲಕಾಲಕ್ಕೆ ಜಮಾ ಮಾಡಿದ ನಿಧಿಯನ್ನು ವಿಶ್ವವಿದ್ಯಾಲಯದ ಅಭಿವೃದ್ಧಿಗಾಗಿ ಉಪಯೋಗಿಸಕೊಳ್ಳತಕ್ಕದ್ದು.

**51. ನಿಧಿಗಳ ನಿರ್ವಹಣೆ.– 47,** 48, 49 ಮತ್ತು 50ನೇ ಪ್ರಕರಣಗಳಡಿಯಲ್ಲಿ ಸ್ಥಾಪಿಸಲಾದ ನಿಧಿಗಳನ್ನು ಪ್ರಬಂಧಕ ಮಂಡಳಿಯ ಸಾಮಾನ್ಯ ಮೇಲ್ವಿಚಾರಣೆ ಮತ್ತು ನಿಯಂತ್ರಣಕ್ಕೆ ಒಳಪಟ್ಟು ನಿಯಮಿಸಬಹುದಾದ ಅಂಥ ವಿಧಾನದಲ್ಲಿ ನಿಯಂತ್ರಿಸತಕ್ಕದ್ದು ಹಾಗೂ ನಿರ್ವಹಿಸತಕ್ಕದ್ದು.

**52. ವಾರ್ಷಿಕ ವರದಿ.–** (1) ವಿಶ್ವವಿದ್ಯಾಲಯದ ವಾರ್ಷಿಕ ವರದಿಯನ್ನು ವ್ಯವಸ್ಥಾಪನಾ ಮಂಡಳಿಯ ನಿರ್ದೇಶನದಲ್ಲಿ ತಯಾರಿಸತಕ್ಕದ್ದು ಮತ್ತು ಅದರ ಅನುಮೋದನೆಗಾಗಿ ಪ್ರಬಂಧಕ ಮಂಡಳಿಗೆ ಸಲ್ಲಿಸತಕ್ಕದ್ದು.

(2) ಪ್ರಬಂಧಕ ಮಂಡಳಿಯು ವಾರ್ಷಿಕ ವರದಿಯನ್ನು ತನ್ನ ಸಭೆಯಲ್ಲಿ ಪರಿಗಣಿಸತಕ್ಕದ್ದು ಹಾಗೂ ಅದನ್ನು ಮಾರ್ಪಾಡುಗಳೊಡನೆ ಅಥವಾ ಮಾರ್ಪಾಡುಗಳಿಲ್ಲದೆ ಅನುಮೋದಿಸಬಹುದು.

(3) ಪ್ರಬಂಧಕ ಮಂಡಳಿಯು ಸೂಕ್ತವಾಗಿ ಅನುಮೋದಿಸಿದ ವಾರ್ಷಿಕ ವರದಿಯ ಒಂದು ಪ್ರತಿಯನ್ನು ಪ್ರತಿವರ್ಷದ ಮಾರ್ಚ್ 31ಕ್ಕೆ ಕೊನೆಗೊಳ್ಳುವ ಆರ್ಥಿಕ ವರ್ಷದ ತರುವಾಯ ಬರುವ ಡಿಸೆಂಬರ್ 31ಕ್ಕೆ ಮೊದಲು ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

**53. ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆ.–** (1) ವಿಶ್ವವಿದ್ಯಾಲಯದ ವಾರ್ಷಿಕ ಲೆಕ್ಕ ಪತ್ರ ಮತ್ತು ಜಮಾ ಖರ್ಚು ಪಟ್ಟಿಯನ್ನು ವ್ಯವಸ್ಥಾಪನಾ ಮಂಡಳಿಯ ನಿರ್ದೇಶನದಲ್ಲಿ ತಯಾರಿಸತಕ್ಕದ್ದು ಮತ್ತು ವಿಶ್ವವಿದ್ಯಾಲಯಕ್ಕೆ ಎಲ್ಲಾ ಮೂಲಗಳಿಂದ ಪ್ರಾಪ್ತವಾಗುವ ಅಥವಾ ಸ್ವೀಕರಿಸಲಾಗುವ ಎಲ್ಲಾ ನಿಧಿಗಳು ಹಾಗೂ ವಿತರಿಸಿದ ಅಥವಾ ಸಂದಾಯ ಮಾಡಿದ ಎಲ್ಲಾ ಮೊಬಲಗುಗಳನ್ನು ವಿಶ್ವವಿದ್ಯಾಲಯವು ನಿರ್ವಹಿಸುವ ಲೆಕ್ಕಪತ್ರದಲ್ಲಿ ನಮೂದಿಸತಕ್ಕದ್ದು.

(2) ವಿಶ್ವವಿದ್ಯಾಲಯದ ವಾರ್ಷಿಕ ಲೆಕ್ಕಪತ್ರಗಳನ್ನು ಪ್ರತಿ ವರ್ಷವೂ ಭಾರತದ ಚಾರ್ಟರ್ಡ್ ಅಕೌಂಟೆಂಟ್‌ಗಳ ಸಂಸ್ಥೆಯ ಸದಸ್ಯರಾಗಿರುವ ಒಬ್ಬ ಲೆಕ್ಕಪರಿಶೋಧಕರಿಂದ ಲೆಕ್ಕಪರಿಶೋಧನೆ ಮಾಡಿಸತಕ್ಕದ್ದು.

(3) ವಾರ್ಷಿಕ ಲೆಕ್ಕಪತ್ರಗಳು ಮತ್ತು ಜಮಾ ಖರ್ಚು ಪಟ್ಟಿಯನ್ನು ಲೆಕ್ಕಪರಿಶೋಧನಾ ವರದಿಯೊಡನೆ, ಪ್ರತಿ ವರ್ಷದ ಮಾರ್ಚ್ 31ಕ್ಕೆ ಕೊನೆಗೊಳ್ಳುವ ಆರ್ಥಿಕ ವರ್ಷದ ತರುವಾಯ ಬರುವ ನವೆಂಬರ್ 30ಕ್ಕೆ ಮೊದಲು ಪ್ರಬಂಧಕ ಮಂಡಳಿಗೆ ಸಲ್ಲಿಸತಕ್ಕದ್ದು.

(4) ವಾರ್ಷಿಕ ಲೆಕ್ಕಪತ್ರಗಳು, ಜಮಾಖರ್ಚು ಪಟ್ಟಿ ಮತ್ತು ಲೆಕ್ಕಪರಿಶೋಧನಾ ವರದಿಯನ್ನು ಪ್ರಬಂಧಕ ಮಂಡಳಿಯು ತನ್ನ ಸಭೆಯಲ್ಲಿ ಪರ್ಯಾಲೋಚಿಸತಕ್ಕದ್ದು ಮತ್ತು ಪ್ರಬಂಧಕ ಮಂಡಳಿಯು ಅದನ್ನು ತನ್ನ ಅಭಿಪ್ರಾಯಗಳೊಡನೆ ಸಂದರ್ಶಕರಿಗೆ ಹಾಗೂ ಸರ್ಕಾರಕ್ಕೆ ಪ್ರತಿ ವರ್ಷದ ಡಿಸೆಂಬರ್ 31ಕ್ಕೆ ಮೊದಲು ಕಳುಹಿಸತಕ್ಕದ್ದು.

**54. ವಿಶ್ವವಿದ್ಯಾಲಯ ದಾಖಲೆಗಳ ರುಜುವಾತಿನ ಮಾದರಿ.–** ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ಸಮಿತಿಯ ಯಾವುದೇ ರಶೀದಿ, ಅರ್ಜಿ, ಸೂಚನೆ, ಆದೇಶ, ವ್ಯವಹರಣೆ ಅಥವಾ ಗೊತ್ತುವಳಿಯು ಅಥವಾ ವಿಶ್ವವಿದ್ಯಾಲಯದ ಸ್ವಾಧೀನದಲ್ಲಿರುವ ಇತರ ದಾಖಲೆಗಳು ಅಥವಾ ವಿಶ್ವವಿದ್ಯಾಲಯವು ಯುಕ್ತವಾಗಿ ನಿರ್ವಹಿಸುವ ಯಾವುದೇ ರಿಜಿಸ್ಟರ್‌ನಲ್ಲಿಯ ಯಾವುದೇ ನಮೂದುಗಳ ಪ್ರತಿಯನ್ನು, ಅದರ ಮೇಲೆ ಕುಲಸಚಿವರು ಪ್ರಮಾಣೀಕರಿಸಿದ್ದರೆ, ಅದನ್ನು ಅಂಥ ರಶೀದಿ, ಅರ್ಜಿ, ಸೂಚನೆ, ಆದೇಶ, ವ್ಯವಹರಣೆ, ಗೊತ್ತುವಳಿ ಅಥವಾ ದಾಖಲೆ ಅಥವಾ ರಿಜಿಸ್ಟರ್‌ನಲ್ಲಿ ಇರುವ ನಮೂದನ್ನು ಮೇಲ್ನೋಟದ ಸಾಕ್ಷ್ಯವೆಂಬುದಾಗಿ ಸ್ವೀಕರಿಸತಕ್ಕದ್ದು ಮತ್ತು ವಿಷಯಗಳ ಸಾಕ್ಷಿಯಾಗಿ ಅಂಗೀಕರಿಸತಕ್ಕದ್ದು ಹಾಗೂ ಮೂಲ ದಾಖಲೆಗಳನ್ನೇ ಸಲ್ಲಿಸಿದ್ದರೆ ಅದನ್ನು, ದಾಖಲಿಸಿರುವ ವಿಷಯಗಳು ಮತ್ತು ವಹಿವಾಟುಗಳ ಸಾಕ್ಷ್ಯವಾಗಿ ಅಂಗೀಕರಿಸಲಾಗುತ್ತಿತ್ತೋ, ಅದೇ ರೀತಿಯಲ್ಲಿ ಇವನ್ನೂ ಸಾಕ್ಷ್ಯವಾಗಿ ಅಂಗೀಕರಿಸತಕ್ಕದ್ದು.

**55. ನಿರ್ದೇಶನಗಳನ್ನು ನೀಡಲು ರಾಜ್ಯ ಸರ್ಕಾರದ ಅಧಿಕಾರ.–** ರಾಜ್ಯಸರ್ಕಾರವು, ಈ ಅಧಿನಿಯಮದ ಉದ್ದೇಶಗಳನ್ನು ಈಡೇರಿಸುವುದಕ್ಕಾಗಿ ಅಥವಾ ಅದರಲ್ಲಿ ಇರುವ ಯಾವುವೇ ಉಪಬಂಧಗಳನ್ನು ಅಥವಾ ಅದರಡಿಯಲ್ಲಿ ರಚಿಸಿದ ಯಾವುವೇ ನಿಯಮಗಳು ಅಥವಾ ಆದೇಶಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ನಿರ್ದೇಶನ ನೀಡುವುದು ಅವಶ್ಯವೆಂದು ಅಥವಾ ಉಚಿತವೆಂದು ಅಭಿಪ್ರಾಯಪಟ್ಟಲ್ಲಿ ಅದು ಅಂಥ ನಿರ್ದೇಶನಗಳನ್ನು ನೀಡಬಹುದು ಮತ್ತು ವಿಶ್ವವಿದ್ಯಾಲಯದ ಪ್ರಬಂಧಕ ಮಂಡಳಿ ಅಥವಾ ಸಂದರ್ಭಾನುಸಾರವಾಗಿ ವ್ಯವಸ್ಥಾಪನಾ ಮಂಡಳಿಯು ಅಂಥ ಪ್ರತಿಯೊಂದು ನಿರ್ದೇಶನವನ್ನು ಪಾಲಿಸತಕ್ಕದ್ದು.

**56. ದಂಡಗಳು.–** (1) ಈ ಅಧಿನಿಯಮದ ಅಥವಾ ಅದರ ಅಡಿಯಲ್ಲಿ ರಚಿತವಾದ ನಿಯಮಗಳು ಉಪಬಂಧಗಳನ್ನು ಅಥವಾ ಯಾವುದೇ ಪರೀಕ್ಷಾ ವಿಷಯಗಳನ್ನು ಅಥವಾ ಪದವಿಗಳನ್ನು ನೀಡುವುದಕ್ಕೆ ಅಥವಾ ಅಂಕಪಟ್ಟಿಗಳನ್ನು ನೀಡುವುದಕ್ಕೆ ಸಂಬಂಧಪಟ್ಟ ವಿಷಯಗಳಲ್ಲಿ ಉಲ್ಲಂಘನೆಗಳನ್ನು ಮಾಡುವ ಯಾವೊಬ್ಬ ವ್ಯಕ್ತಿಯು, ಅಪರಾಧ ನಿರ್ಣಯವಾದ ಮೇಲೆ, ಐವತ್ತು ಸಾವಿರ ರೂಪಾಯಿಗಳಿಗೆ ಕಡಿಮೆಯಲ್ಲದ ಆದರೆ ಹತ್ತು ಲಕ್ಷ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಆರು ತಿಂಗಳ ಅವಧಿಗಿಂತ ಕಡಿಮೆಯಲ್ಲದ ಆದರೆ ಎರಡು ವರ್ಷಗಳ ಅವಧಿಯವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು:

ಪರಂತು, ವಿಶ್ವವಿದ್ಯಾಲಯವೂ ಸಹ ಒಳಗೊಂಡಿರುವಲ್ಲಿ, ವಿಶ್ವವಿದ್ಯಾಲಯವನ್ನು ಪ್ರಾರಂಭಿಸಲು ಈ ಅಧಿನಿಯಮದ ಅಡಿಯಲ್ಲಿ ನೀಡಲಾದ ಅನುಮತಿ ಪತ್ರವನ್ನು ಹಿಂತೆಗೆದುಕೊಳ್ಳತಕ್ಕದ್ದು.

(2) ಈ ಪ್ರಕರಣದ ಅಡಿಯಲ್ಲಿನ ದಂಡವನ್ನು ಇತರ ಯಾವುದೇ ಅಧಿನಿಯಮದಲ್ಲಿ ನಿರ್ದಿಷ್ಟಪಡಿಸಲಾದ ದಂಡಕ್ಕೆ ಬಾಧಕವಾಗದಂತೆ ವಿಧಿಸಬಹುದು.

57. **ಪ್ರವೇಶಿಸುವ ಮತ್ತು ಪರಿಶೋಧಿಸುವ ಅಧಿಕಾರ.–** ಈ ಉದ್ದೇಶಕ್ಕಾಗಿ, ರಾಜ್ಯಸರ್ಕಾರದಿಂದ ಪ್ರಾಧಿಕೃತಗೊಂಡ 'ಎ' ಸಮೂಹದ ಅಧಿಕಾರಿ ದರ್ಜೆಗಿಂತ ಕಡಿಮೆಇಲ್ಲದ ದರ್ಜೆಯ ಯಾವೊಬ್ಬ ಅಧಿಕಾರಿಯು, ಕರ್ನಾಟಕ ಶೈಕ್ಷಣಿಕ ಸಂಸ್ಥೆಗಳ (ಕ್ಯಾಪಿಟೇಶನ್ ಶುಲ್ಕ ನಿಷೇಧ) ಅಧಿನಿಯಮ, 1984ರ (1984ರ ಕರ್ನಾಟಕ ಅಧಿನಿಯಮ 37) ಅಡಿಯಲ್ಲಿ ನಿರ್ದಿಷ್ಟಪಡಿಸಿರಬಹುದಾದ ಅಂಥ ಷರತ್ತುಗಳಿಗೆ ಒಳಪಟ್ಟು, ಈ ಅಧಿನಿಯಮದ ಉದ್ದೇಶಗಳಿಗಾಗಿ, ಆ ಅಧಿನಿಯಮದ 9ನೇ ಪ್ರಕರಣದ ಅಡಿಯಲ್ಲಿ ಉಪಬಂಧಿಸಲಾದಂತಹವೇ ಅಧಿಕಾರಗಳನ್ನು ಚಲಾಯಿಸಲು ಮತ್ತು ಪ್ರಕಾರ್ಯಗಳನ್ನು ನೆರವೇರಿಸಲು ಅಧಿಕೃತನಾದ ಅಧಿಕಾರಿ ಎಂಬುದಾಗಿ ಭಾವಿಸತಕ್ಕದ್ದು.

58. **ವಿಶ್ವವಿದ್ಯಾಲಯವನ್ನು ಸಮಾಪನಗೊಳಿಸಲು ನಿರ್ದೇಶನವನ್ನು ನೀಡುವ ಅಧಿಕಾರ.–** (1) ವಿಶ್ವವಿದ್ಯಾಲಯವು ತನ್ನ ರಚನೆ ಅಥವಾ ನಿಗಮನವನ್ನು ನಿಯಂತ್ರಿಸುವ ಕಾನೂನಿಗೆ ಅನುಸಾರವಾಗಿ ತನ್ನ ಸಮಾಪನವನ್ನು ಉದ್ದೇಶಿಸಿದ್ದಲ್ಲಿ, ಅದು ಕನಿಷ್ಠ ಆರು ತಿಂಗಳ ಲಿಖಿತ ಪೂರ್ವ ಸೂಚನೆಯನ್ನು (ನೋಟಿಸು) ಸರ್ಕಾರಕ್ಕೆ ನೀಡತಕ್ಕದ್ದು.

(2) ಕರ್ನಾಟಕ ರಾಜ್ಯ ಉನ್ನತ ಶಿಕ್ಷಣ ಪರಿಷತ್ತು, ಈ ಕೆಳಗಿನವುಗಳ ಬಗ್ಗೆ, ಎಂದರೆ:–

(i) ಪದವಿಯನ್ನು ನೀಡುವುದಕ್ಕಾಗಿ ಬೋಧನೆಯ ಗುಣಮಟ್ಟ;

(ii) ಶಿಕ್ಷಣದ ಗುಣಮಟ್ಟ;

(iii) ಉನ್ನತ ಶಿಕ್ಷಣದ ವ್ಯಾಪಾರೀಕರಣವನ್ನು ತಡೆಗಟ್ಟುವುದು;

(iv) ಅಧಿನಿಯಮದ ಉಪಬಂಧಗಳ ಉಲ್ಲಂಘನೆಯ ಬಗ್ಗೆ, ಯಾವುದಾದರೂ ಇದ್ದಲ್ಲಿ,

– ಇವುಗಳ ಬಗ್ಗೆ ನಿಯತಕಾಲಿಕ ಪರಿವೀಕ್ಷಣೆಯನ್ನು ನಡೆಸತಕ್ಕದ್ದು ಮತ್ತು ಸರ್ಕಾರಕ್ಕೆ ವರದಿಯನ್ನು ಕಳುಹಿಸತಕ್ಕದ್ದು.

(3) ದುರ್ವ್ಯವಹರಣೆ, ದುರಾಡಳಿತ ಮತ್ತು ಅಶಿಸ್ತು ಆಗಿದೆ ಎಂಬುದನ್ನು ಗುರುತಿಸಿದರೆ, ಸರ್ಕಾರವು, ವಿಶ್ವವಿದ್ಯಾಲಯದ ಆಡಳಿತವರ್ಗದವರಿಗೆ ಆಡಳಿತವನ್ನು ಸರಿಪಡಿಸಬೇಕೆಂದು ನಿರ್ದೇಶನಗಳನ್ನು ನೀಡತಕ್ಕದ್ದು. ನಿಯಮಿಸಬಹುದಾದ ಅಂಥ ಅವಧಿಯೊಳಗೆ ಆ ನಿರ್ದೇಶನಗಳನ್ನು ಪಾಲಿಸದಿದ್ದಲ್ಲಿ ವಿಶ್ವವಿದ್ಯಾಲಯವನ್ನು ಅಥವಾ ಅದರ ಯಾವುದೇ ವ್ಯಾಸಂಗ ಕ್ರಮವನ್ನು (ಕೋರ್ಸ್) ಸಮಾಪನಗೊಳಿಸುವ ಬಗ್ಗೆ ತೀರ್ಮಾನವನ್ನು ಕೈಗೊಳ್ಳುವ ಹಕ್ಕು ಸರ್ಕಾರದಲ್ಲಿ ನಿಹಿತವಾಗಿರತಕ್ಕದ್ದು.

(4) ವಿಶ್ವವಿದ್ಯಾಲಯವನ್ನು ಅಥವಾ ಅದರ ಯಾವುದೇ ವ್ಯಾಸಂಗ ಕ್ರಮವನ್ನು (ಕೋರ್ಸ್) ಸಮಾಪನಗೊಳಿಸುವ ವಿಧಾನವು, ಸರ್ಕಾರವು ಈ ಸಂಬಂಧದಲ್ಲಿ ನಿಯಮಿಸಬಹುದಾದಂತೆ ಇರತಕ್ಕದ್ದು:

ಪರಂತು, ವಿಶ್ವವಿದ್ಯಾಲಯವು ತನ್ನ ಕಾರಣಗಳನ್ನು ಹೇಳಿಕೊಳ್ಳಲು ಸಮಂಜಸ ಅವಕಾಶಗಳನ್ನು ನೀಡಿದ ಹೊರತು ಅಂಥ ಯಾವುದೇ ಕ್ರಮವನ್ನು ಕೈಗೊಳ್ಳತಕ್ಕದ್ದಲ್ಲ.

(5) (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಲಾದ ನೋಟಿಸನ್ನು ಸ್ವೀಕರಿಸಿದ ಮೇಲೆ, ಸರ್ಕಾರವು ಸಂಬಂಧಿಸಿದ ನಿಯಂತ್ರಣಾ ಪ್ರಾಧಿಕಾರದೊಡನೆ ಸಮಾಲೋಚಿಸಿ, ವಿಶ್ವವಿದ್ಯಾಲಯವನ್ನು ಸಮಾಪನಗೊಳಿಸಲು ಅಥವಾ ವ್ಯಾಸಂಗ ಕ್ರಮವನ್ನು ಪರಿಸಮಾಪನಗೊಳಿಸಲು ಉದ್ದೇಶಿಸಿದ ದಿನಾಂಕದಿಂದ, ವಿಶ್ವವಿದ್ಯಾಲಯದಲ್ಲಿ ನಿಯತ ವ್ಯಾಸಂಗ ಕ್ರಮಗಳಲ್ಲಿ ಅಭ್ಯಾಸ ಮಾಡುತ್ತಿರುವ ವಿದ್ಯಾರ್ಥಿಗಳ ಕೊನೆಯ ತಂಡ (ಬ್ಯಾಚ್) ತನ್ನ ವ್ಯಾಸಂಗ ಕ್ರಮವನ್ನು ಮುಗಿಸುವವರೆಗೆ ಪರಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದ ಅಂಥ ವಿಧಾನದಲ್ಲಿ ವಿಶ್ವವಿದ್ಯಾಲಯದ ಆಡಳಿತಕ್ಕೆ ಸೂಕ್ತ ವ್ಯವಸ್ಥೆಯನ್ನು ಮಾಡತಕ್ಕದ್ದು.

59. **ಸಮಾಪನೆಯ ಸಂದರ್ಭದಲ್ಲಿ ವಿಶ್ವವಿದ್ಯಾಲಯದ ವೆಚ್ಚಗಳು.–** (1) 58ನೇ ಪ್ರಕರಣದ (5)ನೇ ಉಪಪ್ರಕರಣದ ಅಡಿಯಲ್ಲಿ ವಿಶ್ವವಿದ್ಯಾಲಯದ ಆಡಳಿತವನ್ನು ಹಸ್ತಾಂತರಗೊಳಿಸುವ ಅವಧಿಯಲ್ಲಿ ಅದರ ಆಡಳಿತಾತ್ಮಕ ವೆಚ್ಚಗಳನ್ನು ಶಾಶ್ವತ ಶಾಸನಬದ್ಧ ದತ್ತಿ ನಿಧಿ, ಸಾಮಾನ್ಯ ನಿಧಿ ಅಥವಾ ಅಭಿವೃದ್ಧಿ ನಿಧಿಯಿಂದ ನೇಮಿಸಬಹುದಾದ ಅಂಥ ವಿಧಾನದಲ್ಲಿ ಭರಿಸತಕ್ಕದ್ದು.

(2) ವಿಶ್ವವಿದ್ಯಾಲಯದ ಆಡಳಿತವನ್ನು ಹಸ್ತಾಂತರಗೊಳಿಸುವ ಅವಧಿಯಲ್ಲಿ ವಿಶ್ವವಿದ್ಯಾಲಯದ ವೆಚ್ಚವನ್ನು ಭರಿಸಲು 47, 48, 49 ಮತ್ತು 50ನೇ ಪ್ರಕರಣಗಳ ಅಡಿಯಲ್ಲಿ ಉಲ್ಲೇಖಿಸಲಾದ ನಿಧಿಯು ಸಾಕಷ್ಟು ಇಲ್ಲದಿದ್ದಲ್ಲಿ, ಅಂಥ ವೆಚ್ಚವನ್ನು ಸರ್ಕಾರವು, ವಿಶ್ವವಿದ್ಯಾಲಯದ ಸ್ವತ್ತುಗಳು ಮತ್ತು ಆಸ್ತಿಗಳನ್ನು ವಿಲೇ ಮಾಡುವ ಮೂಲಕ ಭರಿಸತಕ್ಕದ್ದು.

(3) ವಿಶ್ವವಿದ್ಯಾಲಯದ ಸಮಾಪನೆಯು ದುರ್ವ್ಯವಹರಣೆ ಅಥವಾ ದುರಾಡಳಿತದ ಕಾರಣಗಳಿಗಾಗಿ ಆಗಿದ್ದರೆ, ಸರ್ಕಾರವು ಅಂಥ ದುರ್ವ್ಯವಹಾರಕ್ಕೆ ಅಥವಾ ದುರಾಡಳಿತಕ್ಕೆ ಹೊಣೆಯಾಗಿರುವ ವ್ಯಕ್ತಿಗಳನ್ನು ಗುರುತಿಸುವ ಮತ್ತು ಅವರ ಮೇಲೆ ತಾನು ಸೂಕ್ತವೆಂದು ಭಾವಿಸಬಹುದಾದ ಅಂಥ ದಂಡನೆಯನ್ನು ವಿಧಿಸಲು ಸ್ವತಂತ್ರವಾಗಿರತಕ್ಕದ್ದು.

60. **ತೊಂದರೆಗಳ ನಿವಾರಣೆಗೆ ಅಧಿಕಾರ.–** (1) ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವ ಸಂಬಂಧದಲ್ಲಿ ಯಾವುದೇ ತೊಂದರೆ ಉದ್ಭವಿಸಿದರೆ, ರಾಜ್ಯ ಸರ್ಕಾರವು, ಅಧಿಸೂಚನೆಯ ಅಥವಾ ಆದೇಶದ ಮೂಲಕ ತೊಂದರೆಯ ನಿವಾರಣೆಗಾಗಿ ಅವಶ್ಯಕ ಹಾಗೂ ಸಮಂಜಸವೆಂದು ತನಗೆ ಕಂಡುಬರುವಂಥ ಮತ್ತು ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಲ್ಲದ ಉಪಬಂಧಗಳನ್ನು ರಚಿಸಬಹುದು:

ಪರಂತು, ಈ ಅಧಿನಿಯಮವು ಪ್ರಾರಂಭವಾದ ದಿನಾಂಕದಿಂದ ಐದು ವರ್ಷಗಳು ಮುಕ್ತಾಯವಾದ ತರುವಾಯ ಈ ಪ್ರಕರಣದ ಅಡಿಯಲ್ಲಿ ಅಂಥ ಯಾವುದೇ ಅಧಿಸೂಚನೆ ಅಥವಾ ಆದೇಶವನ್ನು ಹೊರಡಿಸತಕ್ಕದ್ದಲ್ಲ.

(2) (1)ನೇ ಉಪಪ್ರಕರಣದ ಅಡಿಯಲ್ಲಿ ಮಾಡಿದ ಪ್ರತಿಯೊಂದು ಆದೇಶವನ್ನು ಅದನ್ನು ರಚಿಸಿದ ತರುವಾಯ, ಆದಷ್ಟು ಬೇಗನೆ ರಾಜ್ಯ ವಿಧಾನ ಮಂಡಲದ ಮುಂದೆ ಮಂಡಿಸತಕ್ಕದ್ದು.

**61. ರಾಜ್ಯ ಸರ್ಕಾರದ ನಿಯಮಗಳ ರಚನಾಧಿಕಾರ.–** (1) ರಾಜ್ಯ ಸರ್ಕಾರವು, ಈ ಅಧಿನಿಯಮದ ಉದ್ದೇಶಗಳನ್ನು ಈಡೇರಿಸುವುದಕ್ಕಾಗಿ ಅಧಿಸೂಚನೆಯ ಮೂಲಕ ನಿಯಮಗಳನ್ನು ರಚಿಸಬಹುದು.

(2) ಈ ಅಧಿನಿಯಮದ ಅಡಿಯಲ್ಲಿ ಹೊರಡಿಸಲಾದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ, ಆದಷ್ಟು ಬೇಗನೆ, ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ, ಒಂದು ಅಧಿವೇಶನದಲ್ಲಿ ಅಥವಾ ಎರಡು ಅಥವಾ ಹೆಚ್ಚು ನಿರಂತರ ಅಧಿವೇಶನಗಳಲ್ಲಿ ಅಡಕವಾಗಿರಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಅದು ಅಧಿವೇಶನದಲ್ಲಿರುವಾಗ ಮಂಡಿಸತಕ್ಕದ್ದು ಮತ್ತು ಮೇಲೆ ಹೇಳಿದ ಅಧಿವೇಶನ ಅಥವಾ ನಿರಂತರ ಅಧಿವೇಶನಗಳ ನಿಕಟ ತರುವಾಯದ ಅಧಿವೇಶನವು ಮುಕ್ತಾಯವಾಗುವುದಕ್ಕೆ ಮೊದಲು ಉಭಯ ಸದನಗಳು ನಿಯಮದಲ್ಲಿ ಯಾವುದೇ ಮಾರ್ಪಾಡು ಮಾಡಲು ಒಪ್ಪಿದರೆ ಅಥವಾ ಆ ನಿಯಮವನ್ನು ರಚಿಸತಕ್ಕದ್ದಲ್ಲವೆಂದು ಉಭಯ ಸದನಗಳು ಒಪ್ಪಿದರೆ ತದನಂತರ ಅಂಥ ನಿಯಮವು ಹಾಗೆ ಮಾರ್ಪಾಟಾದ ರೀತಿಯಲ್ಲಿ ಪರಿಣಾಮಕಾರಿಯಾಗತಕ್ಕದ್ದು ಅಥವಾ ಸಂದರ್ಭಾನುಸಾರವಾಗಿ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದಾಗ್ಯೂ, ಯಾವುದೇ ಅಂಥ ಮಾರ್ಪಾಡು ಅಥವಾ ರದ್ಧತಿಯು ಆ ನಿಯಮದ ಅಡಿಯಲ್ಲಿ ಈ ಮೊದಲು ಮಾಡಲಾದ ಯಾವುದೇ ಕಾರ್ಯದ ಮಾನ್ಯತೆಗೆ ಬಾಧಕವನ್ನು ಉಂಟುಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ.ಬೋರೇಗೌಡ**
ಸರ್ಕಾರದ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ


| ಭಾಗ – IV-A | ಬೆಂಗಳೂರು, ಗುರುವಾರ, ಫೆಬ್ರವರಿ ೨೮, ೨೦೧೩ (ಫಾಲ್ಗುಣ ೯, ಶಕ ವರ್ಷ ೧೯೩೪) | ನಂ. ೫೨೮ |
|---|---|---|
| Part – IV-A | Bangalore, Thursday, February 28, 2013 (Phalguna 9, Shaka Varsha 1934) | No. 528 |


## FINANCE SECRETARIAT

### NOTIFICATION

### No. FD 02 BGL 2013, Bangalore, dated 28th February 2013

In accordance with instructions contained in Reserve Bank of India's D.O. No. IDMD No.3613/10.3.12/2005-06 dated 17th May 2006, the Government of Karnataka notifies the Revised Model Scheme for Constitution and Administration of the Consolidated Sinking Fund of Government of Karnataka as below:

| | | |
|---|---|---|
| **Title of the Scheme** | 1. | The Scheme shall be called 'Consolidated Sinking Fund Scheme' (hereinafter referred to as 'the Fund') of the Government of Karnataka (hereinafter referred to as 'the Government). |
| **Constitution of the Fund** | **2.** | The Fund will be constituted by the Government of Karnataka for redeeming its outstanding liabilities. |
| **Objective of the Scheme** | **3.** | The Fund is to be utilized as an Amortization Fund for redemption of the outstanding liabilities of the Government commencing from the financial year 2017-18. |
| **Commencement of the Operation of the Scheme** | **4.** | The Fund shall come in to force with effect from the financial year 2012-13. |
| | | **Explanation** |
| | **(a)** | The Fund shall substitute the extant CSF scheme adopted by the Government. |
| | **(b)** | The outstanding balances of the extant CSF scheme as at the end March 2013 shall be transferred to the Fund. |
| | **(c)** | The interest accrued and accumulated in the Fund only shall be utilized towards the redemption of the outstanding liabilities of the Government as hereinafter provided. |
| | **(d)** | The Fund shall not be utilized for any purpose other than redemption of the outstanding liabilities of the Government. |
| | | Provided that the net incremental annual investment of States (i.e., outstanding balance over and above the level in the corresponding period of the previous year) shall be eligible for availing Special WMA under this provision does not exceed the Normal WMA limit. |

(e) The outstanding liabilities are defined to comprise of internal debt of the State Government and Loans & Advance from the Central Government.

**Contribution to the Fund**

5. The Government may contribute to the Fund on a modest scale of at least 0.5 per cent of the outstanding liabilities as at the end of the previous year beginning with the financial year 2012-13. The Government shall make efforts to raise the minimum contribution every year. There is no ceiling on such contributions to the Fund in terms of number of times of making contributions in a year. It is open to the Government to invest in the Fund from the General Revenue at any time or from other sources such as disinvestment proceeds to the Fund, at its discretion. The Government shall not fund its contribution to the Fund out of borrowings from the Reserve Bank.

**Relationship of the Fund with General Revenues**

6. The corpus of the Fund comprising the periodic contributions as well as the income accruing to the Fund shall be kept outside the General Revenues of the Government. The Fund shall be utilized in the manner prescribed in this Scheme.

**Administration of the Fund**

7. The Fund shall be administered by Central Accounts Section of the Reserve Bank of India at Nagpur (herein after referred to as the Bank), subject to such directions/instructions as the Government may issue from time to time.

**Investment of the corpus of the Fund**

8. The accretions to the Fund shall be invested in Government of India Securities of such maturities as the Bank may determine from time to time in consultation with the Government.

**Explanation**

(a) The accretions to the Fund shall include the periodic contributions and the income accruing to the Fund from investment thereof.

(b) The Bank will make available the securities for investment either from its own investment portfolio or by acquiring the securities from the secondary market, without loading any charge other than that indicated in paragraph 10.

**Account Transactions**

9.

(a) The Bank would arrange to raise a debit to the account of the Government maintained with it as per the advice of the Government.

(b) The contributions to the Fund shall be invested by the Bank in Government of India Securities as indicated in paragraph 8 in multiples of Rs.10,000/-.

(c) The periodic accretion to the Fund by way of interest income shall be reinvested by the Bank in a similar manner, in multiples of Rs.10,000/-.

(d) The investments held in the Fund and maturing during currency of the scheme shall be reinvested in accordance with paragraph 8.

(e) No withdrawals will be allowed from the Fund until 2016-17.

Provided that States that have already set up the Fund under the earlier Scheme may withdraw an amount in a year after the lock-in period stipulated in the earlier scheme. The amount shall not exceed the amount of redemption due for that year in respect of open market borrowings.

**Explanation**

(a) Withdrawals may be allowed in the financial year 2017-18 from out of the interest income accrued and accumulated in the Fund up to the financial year 2016-17 towards the redemption of the outstanding liabilities of the Government as per its directions. Similarly, withdrawals may be allowed in the financial year 2018-19 from out of the interest income accrued and accumulated in the Fund up to the financial year 2017-18 towards the redemption of the outstanding liabilities of the Government as per its directions and so on.

(b) The contribution forming the corpus of the Fund shall remain intact, until substantial amount is built up. A review thereof may be taken at an appropriate period from 2017-18.

**(c)** The debit to Government on account of the periodic installments will be accounted under the major head 8222 (Reserve Funds). On the maturity of the loan, the balance outstanding under the head 8222 (sub-head Sinking Fund) is credited to the head 8680 (Miscellaneous Government Account) Ledger Balance Adjustment Account.

**(d)** The Bank shall scroll to the Government the debit on account of investment less the incidental charges in the usual course. However, in order to ensure that the investment transactions of the Fund do not get mixed up with other transactions, these will be indicated distinctly in separate scrolls.

**(e)** The Bank shall arrange to collect interest on the investments and credit the same to the Fund on the due dates.

**(f)** On the maturity of the securities, the Bank shall arrange to redeem the securities. In case of premature disinvestment to meet the liability on account of the claims to be paid, the Bank will decide on the securities to be encashed in consultation with the Government and sell the securities at the ruling price and credit the amount realized, less incidental changes to the Fund. As in the case of debit scrolls, the Bank shall use separate scrolls for the receipts.

**(g)** The provision for expenditure on account of the periodic contributions shall be made in the Budget of the Government under the relevant head. The extent of expenditure to be financed from the Fund shall be withdrawn from the Fund by the disposal of the investment.

**(h)** The Bank shall open a Current Account and Subsidiary General Ledger Account in the name of the Fund and furnish to the Government as at the end of September and March each year, a statement showing the details of investments.

**Service charges for administration of the Fund** **10.** The Government shall pay to the Bank a commission at the rate of 1/8 per cent of one per cent on the turnover of the Fund or at the rate to be mutually decided from time to time.

**Accounts and Audit** **11.** The accounts of the Fund and the investments shall be maintained by the Accountant General of the State in the normal course. The Bank will maintain subsidiary accounts in such manner and details as may be considered by the Government in consultation with the Accountant General.

**Savings** **12.** The Government shall issue instructions relating to the provisions of the Scheme as may be considered from time to time to enable smooth functioning of the scheme. In case of any difficulty in the operation of any provision of Scheme, the Government may, if satisfied, relax the provisions.

**T.P.NARASINGA RAO**
Special Officer (Budget)
Finance Department

# ವಿಶೇಷ ರಾಜ್ಯ ಪತ್ರಿಕೆ


| | | |
|---|---|---|
| ಭಾಗ – **IV-A** | ಬೆಂಗಳೂರು, ಗುರುವಾರ, ಫೆಬ್ರವರಿ ೨೮, ೨೦೧೩ (ಫಾಲ್ಗುಣ ೯, ಶಕ ವರ್ಷ ೧೯೩೪) | ನಂ. ೫೨೯ |
| **Part – IV-A** | **Bangalore, Thursday, February 28, 2013 (Phalguna 9, Shaka Varsha 1934)** | **No. 529** |


## FINANCE SECRETARIAT

### NOTIFICATION - I

### No.FD 05 PES 2013, Bangalore, Dated: 28-02-2013

The draft of the following rules further to amend the Karnataka Excise (Excise Duties and Fees) Rules, 1968, which the Government of Karnataka propose to make in exercise of the powers conferred by section 71 of the Karnataka Excise Act, 1965 (Karnataka Act 21 of 1966) in Notification-I No. FD 05 PES 2013 which was published in Part-IV-A of the Karnataka Gazette (Extra ordinary ) No.499 dated 20-02-2013 inviting objections and suggestions from all persons likely to be affected thereby within seven days from the date of its publication in the official Gazette.

And wheareas the said Gazette was made available to the public on 20th February 2013

And whearas, no objection and suggestion have been received in respect of the said draft by the State Government.

Now therefore, in exercise of the powers conferred by section 71 of the Karnataka Excise Act, 1965 (Karnataka Act 21 of 1966), the Government of Karnataka hereby makes the following Rules, namely:-

**RULES**

1. **Title and commencement**:- (1) These rules may be called the Karnataka Excise (Excise Duties and Fees) (Amendment) Rules, 2013.

(2) They shall come into force with effect from the 1st day of March, 2013.

2. **Amendment of Schedule-D** :– In Schedule-D to the Karnataka Excise (Excise Duties and Fees) Rules,1968, for Serial Number I and the entries relating thereto in corresponding columns, the following shall be substituted, namely:-

| **"Sl No** | **Name of the Article** | **Declared price Range per case containing 8.64/9/12 Bulk litres of liquor** | | **Rate of Additional Excise Duty/Additional Countervailing duty per B.L. of 25° UP** | |
|---|---|---|---|---|---|
| I | Brandy, Whisky, Gin, Rum and such other liquors, but not including Beer,Wine,Toddy and Fenny | From | To | (1) Manufactured in Karnataka and when issued to a Distributor Licensee or a Wholesale Licensee under the Karnataka Excise (Sale of Indian and Foreign Liquors) Rules, 1968, for the purpose of sale within Karnataka but excluding the liquor issued to a licensee holding Military Canteen Licence, Military Canteen Stores Bonded Warehouse Licence or Border Security Force or Para-Military Forces Licences;<br>or<br>(2) Manufactured in other States in India and when imported into Karnataka State by a Distributor Licensee. | (1) Manufactured in Karnataka,-<br>(i) when issued to a licensee holding Military Canteen Licence, Military Canteen Stores Bonded Warehouse Licence or Border Security Force or Para-Military Forces Licences; or<br>(ii) when issued for export to licensees outside Karnataka but within India by way of sale or stock transfer;<br>or<br>(2) Manufactured in other States in India and when imported into Karnataka by a Licensee holding the Military Canteen Stores Bonded Warehouse Licence. |
| | | Rs. Ps. | Rs. Ps. | Rs. Ps. | Rs.Ps. |
| 01 | | 000.00 | 414.00 | 97.00 | 1.00 |
| 02 | | 415.00 | 464.00 | 124.00 | 1.25 |
| 03 | | 465.00 | 514.00 | 155.00 | 1.45 |
| 04 | | 515.00 | 564.00 | 200.00 | 1.75 |
| 05 | | 565.00 | 664.00 | 235.00 | 1.95 |
| 06 | | 665.00 | 764.00 | 264.00 | 2.25 |
| 07 | | 765.00 | 864.00 | 281.00 | 2.35 |
| 08 | | 865.00 | 964.00 | 303.00 | 2.50 |
| 09 | | 965.00 | 1064.00 | 318.00 | 2.60 |
| 10 | | 1065.00 | 1164.00 | 355.00 | 2.75 |
| 11 | | 1165.00 | 1264.00 | 372.00 | 2.85 |
| 12 | | 1265.00 | 1364.00 | 395.00 | 3.00 |
| 13 | | 1365.00 | 1764.00 | 427.00 | 3.10 |
| 14 | | 1765.00 | 2164.00 | 477.00 | 3.25 |
| 15 | | 2165.00 | 4889.00 | 545.00 | 3.35 |
| 16 | | 4890.00 | 7615.00 | 637.00 | 3.50 |
| 17 | | 7616.00 | above | Rs 682/- or 9% per BL on the declared price per case whichever is higher per bulk litre | 3.70" |

By Order and in the Name of the Governor of Karnataka

**M.S. SHIVARAM**
Deputy Secretary to Government
Finance Department
(Admn. & Co-ordination)

**FINANCE SECRETARIAT**

**NOTIFICATION - II**

**No.FD 05 PES 2013, Bangalore, Dated: 28-02-2013**

The draft of the following rules further to amend the Karnataka Excise Licences (General Conditions) Rules, 1967 which the Government of Karnataka propose to make in exercise of the powers conferred by section 71 of the Karnataka Excise Act, 1965 (Karnataka Act 21 of 1966) in Notification-II No. FD 05 PES 2013 dated 20.2.2013 which was published in Part-IV-A of the Karnataka Gazette (Extra ordinary ) No.499 dated 20-02-2013 inviting objections and suggestions from all persons likely to be affected thereby within seven days from the date of its publication in the official Gazette.

And wheareas the said Gazette was made available to the public on 20th February 2013

And whearas, no objection and Suggestion has been received in respect of the said draft by the State Government.

Now therefore, in exercise of the powers conferred by section 71 of the Karnataka Excise Act, 1965 (Karnataka Act 21 of 1966), the Government of Karnataka hereby makes the following Rules, namely:-

**RULES**

**1. Title and commencement** (1) These rules may be called the Karnataka Excise Licences (General Conditions) (Amendment) Rules, 2013.

(2) They shall come into force with effect from the 1st day of March, 2013.

2.**Amendment of Rule 17-B** :-In the Karnataka Excise Licenses (General Conditions) (Amendment) Rules, 1967, in rule 17-B in sub-rule (1), for the words "subject to payment of transfer fee equivalent to the annual licence fee" the words "subject to payment of transfer fee equivalent to twice the annual license fee" shall be substituted.

By Order and in the Name of the Governor of Karnataka

**M.S. SHIVARAM**
Deputy Secretary to Government
Finance Department
(Admn. & Co-ordination)

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – IV-A | ಬೆಂಗಳೂರು, ಗುರುವಾರ, ಫೆಬ್ರವರಿ ೨೮, ೨೦೧೩ (ಫಾಲ್ಗುಣ ೯, ಶಕ ವರ್ಷ ೧೯೩೪) | ನಂ. ೫೩೦ |
| **Part – IV-A** | **Bangalore, Thursday, February 28, 2013 (Phalguna 9, Shaka Varsha 1934)** | **No. 530** |

## HIGH COURT OF KARNATAKA

**NOTIFICATION**

**NO.HCE 249/2011, BANGALORE, DATED 28TH FEBRUARY 2013**

In this office Notification No. HCE 249/2011 dated 15.02.2013 wherein the High Court of Karnataka Service (Conditions of Service and Recruitment) (I Amendment) Rules, 2013 was published in the Karnataka State Gazette (Extra-ordinary) on 15.02.2013, the following entry shall be inserted in the Schedule-II of the said rules:-

After the Entry Senior Book Binder (60A) the following shall be inserted:-

| Sl.No | Designation | Permanent | Temporary | Scale of Pay |
|---|---|---|---|---|
| 61 | Driver | 69 | 17 | 11600-200-1200-250-13000-300-14200-350-15600-400-17200-450-19000-500-21000 |

**P. KRISHNA BHAT**
REGISTRAR GENERAL

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – IV-A<br>**Part – IV-A** | ಬೆಂಗಳೂರು, ಶುಕ್ರವಾರ, ಮಾರ್ಚ್ ೧, ೨೦೧೩ (ಫಾಲ್ಗುಣ ೧೦, ಶಕ ವರ್ಷ ೧೯೩೪)<br>**Bangalore, Friday, March 1, 2013 (Phalguna 10, Shaka Varsha 1934)** | ನಂ. ೫೩೨<br>**No. 532** |

## URBAN DEVELOPMENT SECRETARIAT

### NOTIFICATION

### No.UDD 45 MLR 2013(P-I), Bangalore, dated 01-03-2013

Whereas the term of office of the elected councilor of the **Pandavapura**Taluk Town Panchayat is going to expire and the election to this Town Panchayat is to be conducted in due course.

And whereas, having regard to the above circumstances, election to the office of councilor cannot be held and completed before the expiry of the term of office of the Town Panchayat, Pandavapura, and as such it has become necessary to appoint Administrator to this Town Panchayat for the continued exercise of powers and performance or discharge of duties of functions conferred or imposed on it under the said Act.

Now, therefore, in exercise of the powers conferred by Section 315 of the Karnataka Municipalities Act, 1964(Karnataka Act 22 of 1964) the Government of Karnataka hereby appoints the Tahsildar, Pandavapura as administrator in respect of the Town Panchayat, Pandavapura with effect from 01.03.2013 till the council of this Town Panchayat is duly constituted.

By order and in the name of the Governor of Karnataka

**B. RAMESH BABU**
Under Secretary to Government
Urban Development Department

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – IV-A<br>**Part – IV-A** | ಬೆಂಗಳೂರು, ಶುಕ್ರವಾರ, ಮಾರ್ಚ್ ೧, ೨೦೧೩ (ಫಾಲ್ಗುಣ ೧೦, ಶಕ ವರ್ಷ ೧೯೩೪)<br>**Bangalore, Friday, March 1, 2013 (Phalguna 10, Shaka Varsha 1934)** | ನಂ. ೫೩೩<br>**No. 533** |

## URBAN DEVELOPMENT SECRETARIAT

### CORRIGENDUM

### No. UDD 45 MLR 2013(P-II), Bangalore, dated 01-03-2013

The dates appearing at Column No.3 & 4 of Sl.No.60**(TMC-Shidlaghatta)**in Annexure of Government Notification No.UDD 45 MLR 2013(P-II), dated:18.02.2013 shall be read as **"28.02.2013" & "01.03.2013" instead of "17.03.2013"**& "**18.03.2013**".

**And**

The dates appearing at Column No.3 & 4 of Sl.No.39 **(TP-Ankola)** in Annexure of Government Notification No. UDD 45 MLR 2013(P-I), dated:18.02.2013 shall be read as **"28.02.2013" & "01.03.2013" instead of "10.03.2013"**& "**11.03.2013**".

By order and in the name of the Governor of Karnataka

**B. RAMESH BABU**
Under Secretary to Government
Urban Development Department

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – IV-A | ಬೆಂಗಳೂರು, ಶುಕ್ರವಾರ, ಮಾರ್ಚ್ ೧, ೨೦೧೩ (ಫಾಲ್ಗುಣ ೧೦, ಶಕ ವರ್ಷ ೧೯೩೪) | ನಂ. ೫೩೪ |
| **Part – IV-A** | **Bangalore, Friday, March 1, 2013 (Phalguna 10, Shaka Varsha 1934)** | **No. 534** |


## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಆಕುಕ 63 ಪಿಐಎಂ 2013, ಬೆಂಗಳೂರು, ದಿನಾಂಕ: 01–03–2013**

ಸರ್ಕಾರದ ಆದೇಶ ಸಂಖ್ಯೆ: ಆಕುಕ 357 ಪಿಐಎಂ 2012 ದಿನಾಂಕ: 24–01–2013ಕ್ಕೆ ಹೊರಡಿಸಲಾಗಿದ್ದ ತಿದ್ದುಪಡಿ ಆದೇಶ ಸಂಖ್ಯೆ ಆಕುಕ 63 ಪಿಐಎಂ 2012 ದಿನಾಂಕ 16–02–2013ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂಪಡೆದು, ದಿನಾಂಕ: 24–01–2013ರಂದು ಹೊರಡಿಸಲಾಗಿದ್ದ ಆದೇಶವನ್ನು ಸ್ಥಿರೀಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಎನ್. ಹರಿಣಿಯಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)


# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – I | ಬೆಂಗಳೂರು, ಶನಿವಾರ, ಮಾರ್ಚ್ ೨, ೨೦೧೩ (ಫಾಲ್ಗುಣ ೧೧, ಶಕ ವರ್ಷ ೧೯೩೪) | ನಂ. ೫೩೫ |
| **Part – I** | **Bangalore, Saturday, March 2, 2013 (Phalguna 11, Shaka Varsha 1934)** | **No. 535** |


## PERSONNEL AND ADMINISTRATIVE REFORMS SECRETARIAT

**NOTIFICATION**

**No. DPAR 38 SLU 2013, Bangalore, Dated: 01-03-2013**

**PREAMBLE**:

WHEREAS Shri Jagadish Shettar, Chief Minister of Karnataka has recommended that Shri Justice Subhash B.Adi, Judge, High Court of Karnataka (since resigned) may be appointed as an additional Upa Lokayukta of Karnataka.

WHEREAS this recommendation has been made after consulting the Acting Chief Justice of the High Court of Karnataka, the Speaker, Karnataka Legislative Assembly, the Chairman, Karnataka Legislative Council and Leaders of Opposition in both the Houses of Karnataka Legislature and also in accordance with the judgement of the Hon'ble Supreme Court of India, in CIVIL APPEAL of 2012 [Arising out of SLP (Civil) Nos.15658-15660 of 2012 and 16512-16514 of 2012].

**ORDER**

Now, therefore, in exercise of the powers vested in me under section 3 of the Karnataka Lokayukta Act, 1984 (Karnataka Act No.4 of 1985), **I, H.R.BHARDWAJ, Governor of Karnataka,** hereby appoint Shri Justice Subhash B.Adi, Judge, High Court of Karnataka (since resigned), as the Upa Lokayukta of Karnataka State.

**H.R.BHARDWAJ**
GOVERNOR OF KARNATAKA

By Order and in the name of the Governor of Karnataka

**FAIROZA KHANAM**
Additional Secretary to Government
Department of Personnel and Administrative
Reforms (Service Rules)

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – IV-A<br>**Part – IV-A** | ಬೆಂಗಳೂರು, ಶನಿವಾರ, ಮಾರ್ಚ್ ೨, ೨೦೧೩ (ಫಾಲ್ಗುಣ ೧೧, ಶಕ ವರ್ಷ ೧೯೩೪)<br>**Bangalore, Saturday, March 2, 2013 (Phalguna 11, Shaka Varsha 1934)** | ನಂ. ೫೩೬<br>**No. 536** |

## MINORITY WELFARE, HAJ AND WAKF SECRETARIAT

### NOTIFICATION

### No. MWD 11 WHJ 2013, Bangalore, Dated: 02-03-2013

The resignation tendered by the following two members of the Karnataka State Haj Committee, Bangalore, under the category mentioned against their names are here by accepted as per Section 24 of Haj Committee Act 2002, with immediate effect.

| Sl. No. | Name of the Member | Category |
|---|---|---|
| 1. | Prof. Mumtaz Ali Khan,<br>Member of Karnataka State Haj Committee | Nominated from Member of<br>Legislative Council |
| 2. | Sri Syed Ali bin Haji Syed Abdulrauf Sab<br>Member of Karnataka State Haj Committee | Nominated from Representative of<br>voluntary Organization |

By Order and in the name of the Governor of Karnataka

**ABBAS SHARIEFF**
Under Secretary to Government
Minority Welfare, Haj & Wakf Department

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – IV-A<br>**Part – IV-A** | ಬೆಂಗಳೂರು, ಸೋಮವಾರ, ಮಾರ್ಚ್ ೪, ೨೦೧೩ (ಫಾಲ್ಗುಣ ೧೩, ಶಕ ವರ್ಷ ೧೯೩೪)<br>**Bangalore, Monday, March 4, 2013 (Phalguna 13, Shaka Varsha 1934)** | ನಂ. ೫೩೭<br>**No. 537** |

## LAW JUSTICE AND HUMAN RIGHTS SECRETARIAT

### NOTIFICATION

### Law 13 LAD 2013, Bangalore, Dated: 02-03-2013

In exercise of the powers conferred by section 28 of the Legal Services Authorities Act, 1987 (Central Act 39 of 1987) and in consultation with the Chief Justice of High Court of Karnataka, the Government of Karnataka hereby, makes the following rules further to amend the Karnataka State Legal Services Authorities Rules, 1996, namely:-

**RULES**

**1. Title and commencement.-** (1) These rules may be called the Karnataka State Legal Services Authorities (Amendment) Rules, 2013.

(2) They shall come into force from the date of their publication in the Official Gazette.

**2. Amendment of rule 8.-** In rule 8 of the Karnataka State Legal Services Authorities Rules, 1996 (hereinafter referred to as the said rules) in sub-rule(1),-

(i) in serial no.2 for the words, " Senior Munsiff ", the words "Civil Judge" shall be substituted:-

(ii) after serial no.2 the following shall be inserted, namely:-

"2A. Assistant Public Prosecutor/Senior most Assistant Public Prosecutor working at the place of location of Taluka Legal Services Committees in the State ---- Working Member Secretary".

**3. Insertion of new rule 9A .-** After rule 9 of the said rules, the following shall be inserted, namely:-

"**9A. Functions of the Working Member Secretary of Taluka Legal Services Committee in the State.-** The functions of the Working Member Secretary of Taluka Legal Services Committee shall be the following namely,-

(i) to organize Legal Literacy Programmes/Workshops and preparations of reports and follow-up action thereof;

(ii) to organize Lok Adalats, mediation and conciliation sittings, coordinate with members of Bar, officers of financial institutions, officers of Police Department, officers of Insurance Companies and other stakeholders in the matter of disposal of cases through Lok Adalat sittings;

(iii) to organize legal awareness camps on specific subjects, on specific days, as per the plan of action National Legal Services Authority and Karnataka State Legal Services Authority for the benefit of various target groups;

(iv) to organize Para Legal Volunteer's training programme for the selected Para Legal Volunteers of Taluka Legal Services Committee;

(v) to assist eligible and weaker sections of community in the matter of getting free legal aid, services, etc., from legal services institutions;

(vi) to organize legal literacy camps through Kanoonu Saksharatha Rathaas and Mobile Lok Adalat Buses as per the tour programme of Taluka Legal Services Committee;

(vii) to build liaison with President, Secretary and other office-bearers of Bar Association, heads of Governmental and non-Governmental organizations, Para Legal Volunteers(PLVs), Advocates on the panel of the Taluka Legal Services Committee, Advocate heading Legal Aid Clinic in Court complex, Advocates attending CDPO Legal Aid Clinic, Clinics in Taluka Office, Advocates heading Legal clinic in jail, Principals and Headmasters of Legal Aid Clinics/Clubs in Schools and Colleges, office-bearers and members of NGOs, representatives of the people, public in general etc;

(viii) to perform such other functions specially assigned by the Taluka Legal Services Committee.

**Explanation:** (1) The Chairman and Member Secretary of District Legal Services Authority and The Taluka Legal Services Committee shall have financial control over the matters and shall formulate legal aid programme for implementation by the Working Member Secretary, who shall carry out such directions, as per the directions of the Chairman and Member Secretary of District Legal Services Authority and the Taluka Legal Services Committee.

(2) The Tahsildar and Deputy Superintendent of Police/Circle Inspector of the Taluka, being Ex-Officio members of the Taluka Legal Services Committee shall render all necessary assistance to the Working Member Secretary of Taluka Legal Services Committee for the purpose of implementation of the programme etc., as detailed above.

By Order and and in the name of the Governor of Karnataka

**G.L. MADIVAL**
Under secretary to Government, (Admn-2)
Law Justice and Human Rights Department

# ವಿಶೇಷ ರಾಜ್ಯ ಪತ್ರಿಕೆ


| | | |
|---|---|---|
| ಭಾಗ – I<br>**Part – I** | ಬೆಂಗಳೂರು, ಸೋಮವಾರ, ಮಾರ್ಚ್ ೪, ೨೦೧೩ (ಫಾಲ್ಗುಣ ೧೩, ಶಕ ವರ್ಷ ೧೯೩೪)<br>**Bangalore, Monday, March 4, 2013 (Phalguna 13, Shaka Varsha 1934)** | ನಂ. ೫೩೮<br>**No. 538** |


## ಕರ್ನಾಟಕ ಸರ್ಕಾರದ ನಡವಳಿಗಳು

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಜಿಲ್ಲಾ ಕಾನೂನು ಸೇವಾ ಪ್ರಾಧಿಕಾರಗಳ ಪೂರ್ಣಾವಧಿಯ ಸದಸ್ಯ ಕಾರ್ಯದರ್ಶಿ ಹುದ್ದೆಯಲ್ಲಿ ಹಿರಿಯ ಸಿವಿಲ್ ನ್ಯಾಯಾಧೀಶರನ್ನು ನೇಮಕ ಮಾಡುವ ಸಲುವಾಗಿ ಹುದ್ದೆಗಳನ್ನು ಸೃಜಿಸುವ ಕುರಿತು.

**ಓದಲಾಗಿದೆ :**

1) ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಇವರ ಪತ್ರ ಸಂಖ್ಯೆ: LCI.I/200/98, ದಿನಾಂಕ: 17.10.2006, 24.11.2006.
2) ಸದಸ್ಯ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರ ಇವರ ಪತ್ರ ದಿನಾಂಕ 16.04.2012
3) ಸದಸ್ಯ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರ ಇವರ ಪತ್ರ ದಿನಾಂಕ 05.01.2013

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂಖ್ಯೆ(1) ರ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಮತ್ತು ಕ್ರಮ ಸಂಖ್ಯೆ (2) ಮತ್ತು (3) ರ ಸದಸ್ಯ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಕಾನೂನು ಸೇವಾ ಪ್ರಾಧಿಕಾರ ಇವರ ಪತ್ರಗಳಲ್ಲಿ ಹಾಲಿ ಜಿಲ್ಲಾ ಕಾನೂನು ಸೇವೆಗಳ ಪ್ರಾಧಿಕಾರದ ಸದಸ್ಯ ಕಾರ್ಯದರ್ಶಿಗಳಾಗಿ ಕಾರ್ಯನಿರ್ವಹಿಸುತ್ತಿರುವ ಹಿರಿಯ ಶ್ರೇಣಿ ನ್ಯಾಯಾಧೀಶರ ಮೇಲೆ ಹೆಚ್ಚಿನ ಕೆಲಸದ ಒತ್ತಡ ಇರುವುದರಿಂದ ಪ್ರಾಧಿಕಾರದ ಮತ್ತು ನ್ಯಾಯಾಲಯದ ಎರಡು ಕರ್ತವ್ಯಗಳನ್ನು

ಪರಿಣಾಮಕಾರಿಯಾಗಿ ನಿರ್ವಹಿಸಲು ಅಡಚಣೆಯಾಗುತ್ತಿರುವುದರಿಂದ ರಾಷ್ಟ್ರೀಯ ಕಾನೂನು ಸೇವೆಗಳ ಪ್ರಾಧಿಕಾರದವರ ಸೂಚನೆಯಂತೆ ಮತ್ತು ರಾಷ್ಟ್ರೀಯ ಕಾನೂನು ಸೇವಾ ಪ್ರಾಧಿಕಾರದವರು ಜಾರಿಗೆ ತಂದಿರುವ/ತರುವ ಯೋಜನೆಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಅನುಕೂಲವಾಗುವಂತೆ ರಾಜ್ಯದ ಎಲ್ಲಾ 30 ಜಿಲ್ಲೆಗಳ ಜಿಲ್ಲಾ ಪ್ರಾಧಿಕಾರದ ಸದಸ್ಯ ಕಾರ್ಯದರ್ಶಿ/ ಸಿವಿಲ್ ನ್ಯಾಯಾಧೀಶರು (ಹಿ.ಶ್ರೇ) ಹುದ್ದೆಗಳನ್ನು ಸೃಜಿಸಿ ಆದೇಶ ಹೊರಡಿಸಿ, ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರದ ನಿಯಮಗಳು, 1996ರ ನಿಯಮ 7(1) ಕಲಂ (4)ಕ್ಕೆ ತಿದ್ದುಪಡಿ ಮಾಡಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 9 ಎಲ್ಎಡಿ 2012, ಬೆಂಗಳೂರು ದಿನಾಂಕ 01.03.2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಕಾನೂನು ಸೇವಾ ಪ್ರಾಧಿಕಾರದಡಿ ಬರುವ ಜಿಲ್ಲಾ ಕಾನೂನು ಸೇವಾ ಪ್ರಾಧಿಕಾರಗಳ ಪೂರ್ಣಾವಧಿ ಕಾರ್ಯನಿರ್ವಹಿಸಲು ಈ ಕೆಳಕಂಡಂತೆ ಸದಸ್ಯ ಕಾರ್ಯದರ್ಶಿಗಳು/ಹಿರಿಯ ಸಿವಿಲ್ ನ್ಯಾಯಾಧೀಶರು ಹಾಗೂ ಅಗತ್ಯವಾದ ವಿವಿಧ ವೃಂದದ ಹುದ್ದೆಗಳನ್ನು ಸೃಜಿಸಲು ಮಂಜೂರಾತಿ ನೀಡಲಾಗಿದೆ.

| ಕ್ರಸಂಖ್ಯೆ | ಹುದ್ದೆಗಳ ಪದನಾಮ | ಸೃಜಿಸಲಾದ ಹುದ್ದೆಗಳ ಸಂಖ್ಯೆ |
|---|---|---|
| 1 | ಹಿರಿಯ ಸಿವಿಲ್ ನ್ಯಾಯಾಧೀಶರು | ಮೂವತ್ತು (30) |
| 2 | ಶಾಖಾಧಿಕಾರಿಗಳು/ಅಧೀಕ್ಷಕರು | ಮೂವತ್ತು (30) |
| 3 | ಆಪ್ತ ಸಹಾಯಕರು/ಶೀಘ್ರಲಿಪಿಗಾರರು | ಮೂವತ್ತು (30) |
| 4 | ಬೆರಳಚ್ಚುಗಾರರು | ಮೂವತ್ತು (30) |
| 5 | ದಲಾಯತ್/Peons | ಮೂವತ್ತು (30) |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 32 ವೆಚ್ಚ–10/2013 ದಿನಾಂಕ 28.02.2013ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಎಲ್. ಮಡಿವಾಳ**
ಸರ್ಕಾರದ ಅಧೀನ ಕಾರ್ಯದರ್ಶಿ(ಆಡಳಿತ–2)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ


| ಭಾಗ – IV-A | ಬೆಂಗಳೂರು, ಸೋಮವಾರ, ಮಾರ್ಚ್ ೪, ೨೦೧೩ (ಫಾಲ್ಗುಣ ೧೩, ಶಕ ವರ್ಷ ೧೯೩೪) | ನಂ. ೫೩೯ |
|---|---|---|
| Part – IV-A | Bangalore, Monday, March 4, 2013 (Phalguna 13, Shaka Varsha 1934) | No. 539 |


## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಂವ್ಯಶಾಇ 83 ಶಾಸನ 2012, ಬೆಂಗಳೂರು, ದಿನಾಂಕ: 04.03.2013**

ಕೆಎಲ್ಇ ತಾಂತ್ರಿಕ ವಿಶ್ವವಿದ್ಯಾಲಯ ವಿಧೇಯಕ, 2012– ಇದಕ್ಕೆ 2013ರ ಫೆಬ್ರವರಿ ತಿಂಗಳ ಇಪ್ಪತ್ತೈದನೇ ದಿನಾಂಕದಂದು ಘನತೆವೆತ್ತ ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2013ರ ಕರ್ನಾಟಕ ಅಧಿನಿಯಮ ಸಂಖ್ಯೆ: 22 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**2013 ರ ಕರ್ನಾಟಕ ಅಧಿನಿಯಮ ಸಂಖ್ಯೆ: 22**

(2013ರ ಮಾರ್ಚ್ ಮಾಹೆಯ ನಾಲ್ಕನೇ ದಿನಾಂಕದಂದು ಕರ್ನಾಟಕ ರಾಜ್ಯಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

**ಕೆಎಲ್ಇ ತಾಂತ್ರಿಕ ವಿಶ್ವವಿದ್ಯಾಲಯ ಅಧಿನಿಯಮ, 2012**

(2013ರ ಫೆಬ್ರವರಿ ಮಾಹೆಯ ಇಪ್ಪತ್ತೈದನೇ ದಿನಾಂಕದಂದು ರಾಜ್ಯಪಾಲರ ಅನುಮತಿಯನ್ನು ಪಡೆಯಲಾಗಿದೆ)

ಸಾಮಾನ್ಯ, ತಾಂತ್ರಿಕ, ಆರೋಗ್ಯ, ವ್ಯವಸ್ಥಾಪನೆ, ನೈಸರ್ಗಿಕ ಮತ್ತು ತತ್ಸಂಬಂಧಿ ವಲಯಗಳಲ್ಲಿ ಹಾಗೂ ಅವುಗಳಿಗೆ ಸಂಬಂಧಿಸಿದ ಅಥವಾ ಅವುಗಳಿಗೆ ಆನುಷಂಗಿಕವಾದ ವಿಷಯಗಳಲ್ಲಿ ವಿಶ್ವವಿದ್ಯಾಲಯದ ಶಿಕ್ಷಣದ ಪ್ರಗತಿಪರ ವಿಚಾರಗಳನ್ನು ಉತ್ತೇಜಿಸಲು ಮತ್ತು ಕೈಗೊಳ್ಳಲು ಖಾಸಗಿ ವಲಯದಲ್ಲಿ ಒಂದು ಏಕಾತ್ಮಕ ಸ್ವರೂಪದ ವಿಶ್ವವಿದ್ಯಾಲಯವನ್ನು ಕರ್ನಾಟಕ ರಾಜ್ಯದಲ್ಲಿ ಸ್ಥಾಪಿಸಿ ನಿಗಮಿತಗೊಳಿಸುವುದಕ್ಕಾಗಿ ಒಂದು ಅಧಿನಿಯಮ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಸಾಮಾನ್ಯ, ತಾಂತ್ರಿಕ, ಆರೋಗ್ಯ, ವ್ಯವಸ್ಥಾಪನೆ, ನೈಸರ್ಗಿಕ ಮತ್ತು ತತ್ಸಂಬಂಧಿ ವಲಯಗಳಲ್ಲಿ ಹಾಗೂ ಅವುಗಳಿಗೆ ಸಂಬಂಧಿಸಿದ ಅಥವಾ ಅವುಗಳಿಗೆ ಆನುಷಂಗಿಕವಾದ ವಿಷಯಗಳಲ್ಲಿ ವಿಶ್ವವಿದ್ಯಾಲಯದ ಶಿಕ್ಷಣದ ಪ್ರಗತಿಪರ ವಿಚಾರಗಳನ್ನು ಉತ್ತೇಜಿಸಲು ಮತ್ತು ಕೈಗೊಳ್ಳಲು ಖಾಸಗಿ ವಲಯದಲ್ಲಿ ಒಂದು ಏಕಾತ್ಮಕ ಸ್ವರೂಪದ ವಿಶ್ವವಿದ್ಯಾಲಯವನ್ನು ಕರ್ನಾಟಕ ರಾಜ್ಯದಲ್ಲಿ ಸ್ಥಾಪಿಸಿ ನಿಗಮಿತಗೊಳಿಸುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೂರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:–

## ಅಧ್ಯಾಯ – I

## ಪ್ರಾರಂಭಿಕ

**1. ಸಂಕ್ಷಿಪ್ತ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕೆಎಲ್‌ಇ ತಾಂತ್ರಿಕ ವಿಶ್ವವಿದ್ಯಾಲಯ ಅಧಿನಿಯಮ, 2012 ಎಂದು ಕರೆಯತಕ್ಕದ್ದು.

(2) ಇದು ಇಡೀ ಕರ್ನಾಟಕ ರಾಜ್ಯಕ್ಕೆ ವ್ಯಾಪ್ತವಾಗತಕ್ಕದ್ದು.

(3) ಇದು ರಾಜ್ಯ ಸರ್ಕಾರವು ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದ ಅಂಥ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.–** ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) "ಶೈಕ್ಷಣಿಕ ಪರಿಷತ್ತು (ಅಕೆಡೆಮಿಕ್ ಕೌನ್ಸಿಲ್)" ಎಂದರೆ, 26ನೇ ಪ್ರಕರಣದ ಅಡಿಯಲ್ಲಿ ಸ್ಥಾಪಿಸಲಾದ ವಿಶ್ವವಿದ್ಯಾಲಯದ ಶೈಕ್ಷಣಿಕ ಪರಿಷತ್ತು;

(ಬಿ) "ಕಾರ್ಯಸೂಚಿ ವಿಷಯಗಳು", ಎಂದರೆ, ಪರಿನಿಯಮಗಳಲ್ಲಿ ಹೆಸರಿಸಬಹುದಾದ ಮತ್ತು ಒಂದು ಸಭೆಯಲ್ಲಿ ಆ ವಿಷಯಗಳನ್ನು ಮತ್ತು ಕಲಾಪಗಳನ್ನು ಅನುಮೋದಿಸಬಹುದೆಂದು ತಮ್ಮ ಸಮ್ಮತಿ ಸೂಚಿಸಿ ಕುಲಾಧಿಪತಿಯವರು ಮುಂಚಿತವಾಗಿಯೇ ಲಿಖಿತ ಅನುಮೋದನೆಯನ್ನು ಕೊಟ್ಟಿದ್ದಾಗ ಮಾತ್ರವೇ ಸಂದರ್ಭಾನುಸಾರ ಪ್ರಬಂಧಕರ ಮಂಡಳಿ ಅಥವಾ ವ್ಯವಸ್ಥಾಪನಾ ಮಂಡಳಿ ಅಥವಾ ಯಾವುದೇ ಸಮಿತಿಯವರು ಕಾರ್ಯಸೂಚಿಯಲ್ಲಿ ಸೇರಿಸಬಹುದಾದ ಅಥವಾ ಸಭೆಯಲ್ಲಿ ಚರ್ಚೆಗೆ ತೆಗೆದುಕೊಂಡು ನಿರ್ಣಯವನ್ನು ಕೊಡಬಹುದಾದ ಎಲ್ಲಾ ವಿಷಯಗಳು ಮತ್ತು ಕಲಾಪಗಳು;

(ಸಿ) "ಪ್ರಬಂಧಕರ ಮಂಡಳಿ" ಎಂದರೆ, 24ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿರುವ ವಿಶ್ವವಿದ್ಯಾಲಯದ ಪ್ರಬಂಧಕರ ಮಂಡಳಿ;

(ಡಿ) "ಕುಲಾಧಿಪತಿ", "ಕುಲಪತಿ", "ಸಹಕುಲಪತಿ" ಎಂದರೆ, ಅನುಕ್ರಮವಾಗಿ ವಿಶ್ವವಿದ್ಯಾಲಯದ ಕುಲಾಧಿಪತಿ, ಕುಲಪತಿ ಮತ್ತು ಸಹಕುಲಪತಿ;

(ಇ) "ಕ್ಯಾಂಪಸ್" ಎಂದರೆ, ಅದು ಎಲ್ಲಾದರೂ ಇರಲಿ ವಿಶ್ವವಿದ್ಯಾಲಯವು ಸ್ಥಾಪಿಸಿದ, ನಿರ್ವಹಿಸುವ ಒಂದು ಕ್ಯಾಂಪಸ್;

(ಎಫ್) "ಸಮಿತಿಗಳು" ಎಂದರೆ, ಈ ಅಧಿನಿಯಮದಡಿಯಲ್ಲಿ ರೂಪಿಸಲಾದ ಸಮಿತಿಗಳು ಅಥವಾ ಸಂದರ್ಭಾನುಸಾರವಾಗಿ ವಿಶ್ವವಿದ್ಯಾಲಯದ ವಿವಿಧ ಕಾರ್ಯಕರ್ತರು ರಚಿಸಿರುವ ಸಮಿತಿಗಳು ಮತ್ತು ಅದರಲ್ಲಿ ಶೋಧನಾ ಸಮಿತಿ, ನಾಮನಿರ್ದೇಶನ ಸಮಿತಿ, ಹಣಕಾಸು ಸಮಿತಿ, ಹಣಕಾಸು ಪರಿಷತ್ತು ಮತ್ತು ಅಂಥ ಇತರ ಸಮಿತಿಗಳು ಒಳಗೊಳ್ಳುತ್ತವೆ;

(ಜಿ) "ಘಟಕ ಕಾಲೇಜು" ಎಂದರೆ, ವಿಶ್ವವಿದ್ಯಾಲಯವು ಸ್ಥಾಪಿಸಿ ನಿರ್ವಹಿಸುತ್ತಿರುವ ಒಂದು ಕಾಲೇಜು ಅಥವಾ ಸಂಸ್ಥೆ;

(ಹೆಚ್) "ಕಾರ್ಯಕಾರಿ ಪರಿಷತ್ತು" ಎಂದರೆ, 25ನೇ ಪ್ರಕರಣದ ಅಡಿಯಲ್ಲಿ ಸ್ಥಾಪಿತವಾದ ವಿಶ್ವವಿದ್ಯಾಲಯದ ಕಾರ್ಯಕಾರಿ ಪರಿಷತ್ತು;

(ಐ) "ಹಣಕಾಸು ಪರಿಷತ್ತು" ಎಂದರೆ, 28ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿರುವ ವಿಶ್ವವಿದ್ಯಾಲಯದ ಹಣಕಾಸು ಸಮಿತಿ;

(ಜೆ) "ಸರ್ಕಾರ" ಎಂದರೆ, ಕರ್ನಾಟಕ ಸರ್ಕಾರ;

(ಕೆ) "ರಾಷ್ಟ್ರೀಯ ಅಧಿಮಾನ್ಯತಾ ಸಂಸ್ಥೆಗಳು" ಎಂದರೆ, ವಿಶ್ವವಿದ್ಯಾಲಯ ಅನುದಾನ ಆಯೋಗ, ಅಖಿಲ ಭಾರತ ತಾಂತ್ರಿಕ ಶಿಕ್ಷಣ ಪರಿಷತ್ತು, ಭಾರತೀಯ ವೈದ್ಯಕೀಯ ಪರಿಷತ್ತು, ಭಾರತೀಯ ಔಷಧ ವಿಜ್ಞಾನ ಪರಿಷತ್ತು, ಭಾರತೀಯ ಕೃಷಿ ಸಂಶೋಧನಾ ಪರಿಷತ್ತು, ರಾಷ್ಟ್ರೀಯ ಮೌಲ್ಯಮಾಪನ ಮತ್ತು ಅಧಿಮಾನ್ಯತಾ ಪರಿಷತ್ತು, ರಾಷ್ಟ್ರೀಯ ಬೋಧಕ ಶಿಕ್ಷಣ ಪರಿಷತ್ತು, ದೂರಶಿಕ್ಷಣ ಪರಿಷತ್ತು, ವೈಜ್ಞಾನಿಕ ಮತ್ತು ಕೈಗಾರಿಕಾ ಸಂಶೋಧನಾ ಪರಿಷತ್ತು ಮುಂತಾದ, ಉನ್ನತ ಶಿಕ್ಷಣದಲ್ಲಿ ಗುಣಮಟ್ಟದ ಶಿಕ್ಷಣ ದೊರೆಯುವಂತೆ ನೋಡಿಕೊಳ್ಳುವುದಕ್ಕಾಗಿ ಗುಣಮಟ್ಟಗಳು ಮತ್ತು ಷರತ್ತುಗಳನ್ನು ವಿಧಿಸುವುದಕ್ಕಾಗಿ, ಕೇಂದ್ರ ಸರ್ಕಾರವು ಸ್ಥಾಪಿಸಿರುವ ಒಂದು ಸಂಸ್ಥೆ ಮತ್ತು ಇದರಲ್ಲಿ ಸರ್ಕಾರವೂ ಸೇರಿರುತ್ತದೆ;

(ಎಲ್) "ನಿಯಮಿಸಲಾದುದು" ಎಂದರೆ, ಈ ಅಧಿನಿಯಮದಡಿಯಲ್ಲಿ ಸರ್ಕಾರವು ರಚಿಸಲಾದ ನಿಯಮಗಳ ಮೂಲಕ ನಿಯಮಿಸಲಾದುದು;

(ಎಂ) "ಒಂದು ಘಟಕ ಕಾಲೇಜಿಗೆ ಸಂಬಂಧಪಟ್ಟಂತೆ ಪ್ರಾಂಶುಪಾಲರು" ಎಂದರೆ, ಘಟಕ ಕಾಲೇಜಿನ ಮುಖ್ಯಸ್ಥರು ಮತ್ತು ಪ್ರಾಂಶುಪಾಲರು ಇಲ್ಲದಿದ್ದಲ್ಲಿ ಅಥವಾ ನೇಮಕವಾದ ಪ್ರಾಂಶುಪಾಲರ ಗೈರುಹಾಜರಿಯಲ್ಲಿ, ಪ್ರಾಂಶುಪಾಲರಾಗಿ ಕರ್ತವ್ಯ ನಿರ್ವಹಿಸಲು ತಾತ್ಕಾಲಿಕವಾಗಿ ನೇಮಕಗೊಂಡಿರುವ ಉಪಪ್ರಾಂಶುಪಾಲರು ಅಥವಾ ಯಾವುದೇ ಇತರ ವ್ಯಕ್ತಿಯೂ ಇದರಲ್ಲಿ ಒಳಗೊಳ್ಳುತ್ತಾರೆ;

(ಎನ್) "ಕುಲಸಚಿವರು" ಎಂದರೆ, ವಿಶ್ವವಿದ್ಯಾಲಯದ ಕುಲಸಚಿವರು;

